ಕನ್ನಡ ವಿಶ್ವವಿದ್ಯಾಲಯ, ಹಂಪಿ.



# ಶ್ರೀ ಕ್ಷೇತ್ರ ಕಬ್ಬಳಿ-ಒಂದು ಸಾಂಸ್ಕೃತಿಕ ಅಧ್ಯಯನ.

ಎಂ.ಫಿಲ್. ಪದವಿಗಾಗಿ ರಚಿಸಿ ಸಲ್ಲಿಸುತ್ತಿರುವ ನಿಬಂಧ.

ನಿಬಂಧಕಾರರು

ದೊರೇಶ (ರಿ.ನಂ.೦೨)

ಶ್ರೀ ಕುವೆಂಪು ಸ್ನಾತಕೋತ್ತರ ಕೇಂದ್ರ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ

ಮೈಸೂರು-೧೨

ಮಾರ್ಗದರ್ಶಕರು

ಡಾ. ಸಿ.ಪಿ.ಕೃಷ್ಣಕುಮಾರ್

ನಿವೃತ್ತ ಪ್ರಾಧ್ಯಾಪಕರು

ವಿನಾಯಕ ನಗರ

ಮೈಸೂರು-೧೨




೨೦೦೬-೦೭

ಕನ್ನಡ ವಿಶ್ವವಿದ್ಯಾಲಯ, ಹಂಪಿ.



# ಶ್ರೀ ಕ್ಷೇತ್ರ ಕಬ್ಬಳಿ- ಒಂದು ಸಾಂಸ್ಕೃತಿಕ ಅಧ್ಯಯನ.

ಎಂ.ಫಿಲ್ ಪದವಿಗಾಗಿ ರಚಿಸಿ ಸಲ್ಲಿಸುತ್ತಿರುವ ನಿಬಂಧ.

ನಿಬಂಧಕಾರರು

ದೊರೇಶ (ರಿ.ನಂ.೦೨)

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಶ್ರೀ ಕುವೆಂಪು ಸ್ನಾತಕೋತ್ತರ ಕೇಂದ್ರ,

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀ ಪುರಂ,

ಮೈಸೂರು-೧೨

೨೦೦೬-೦೭

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ದೊರೇಶ (ರಿ.ನಂ.೦೨) ಇವರು ನನ್ನ ಮಾರ್ಗದರ್ಶನದಲ್ಲಿ ಕಳೆದ ಮೂರು ತಿಂಗಳಿನಿಂದ **ಶ್ರೀ ಕ್ಷೇತ್ರ ಕಬ್ಬಳಿ ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ವಿಷಯದ ಬಗ್ಗೆ ಎಂ.ಫಿಲ್. ಪದವಿ ಪರೀಕ್ಷೆಗಾಗಿ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಈ ನಿಬಂಧವನ್ನು ಇಡಿಯಾಗಿ ಅಥವಾ ಬಿಡಿಯಾಗಿ ಯಾವುದೇ ಪದವಿಗೆ ಇವರು ಬಳಸಿಕೊಂಡಿಲ್ಲವೆಂದು ಪ್ರಮಾಣ ಪತ್ರವನ್ನು ನೀಡುತ್ತೇನೆ.

ಸಿದ್ದಣ್ಣ [signature]

**ಮಾರ್ಗದರ್ಶಕರು**

ದಿನಾಂಕ:– ೨೦|೦೨|೦೭

ಸ್ಥಳ:– ಮೈಸೂರು.

# ಪ್ರಮಾಣ ಪತ್ರ

**ಶ್ರೀ ಕ್ಷೇತ್ರ ಕಬ್ಬಳಿ ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ವಿಷಯದ ಬಗ್ಗೆ ಎಂ.ಫಿಲ್. ಪದವಿಗಾಗಿ ನಿಬಂಧವನ್ನು ರಚಿಸಿದ್ದೇನೆ. ಈ ನಿಬಂಧವನ್ನು ಇಡಿಯಾಗಿ ಮತ್ತು ಬಿಡಿಯಾಗಿ ಬೇರೆ ಯಾವುದೇ ವಿಶ್ವವಿದ್ಯಾಲಯದ ಪದವಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

**ನಿಬಂಧಕಾರರು**

ದಿನಾಂಕ:– 31/07/07

ಸ್ಥಳ:– ಮೈಸೂರು

## ಕೃತಜ್ಞತೆಗಳು

ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಯನ್ನು ತಮ್ಮ ಕೇಂದ್ರಕ್ಕೆ ತಂದು ನಮಗೆಲ್ಲಾ ಅನುಕೂಲ ಮಾಡಿಕೊಟ್ಟ ನಾಡಿನ ಹಿರಿಯ ಸಾಹಿತಿ, **ನಾಡೋಜ ದೇಜ.ಗೌ** ಅವರಿಗೆ ಹೃದಯಪೂರ್ವಕ ವಂದನೆಗಳು. ಈ ನಿಬಂಧವನ್ನು ಸಿದ್ಧಪಡಿಸಲು ಮಾರ್ಗದರ್ಶಕರಾಗಿ ಒಪ್ಪಿಕೊಂಡು ಹಲವು ಸಲಹೆಗಳನ್ನಿತ್ತ ಹಿರಿಯ ಚೇತನ **ಡಾ. ಸಿ.ಪಿ ಕೃಷ್ಣಕುಮಾರ್** ಅವರಿಗೆ ಆಭಾರಿಯಗಿರುತ್ತೇನೆ. ಎಂ.ಫಿಲ್ ಪದವಿಯನ್ನು ಪಡೆಯಲು ಹಣಕಾಸಿನ ನೆರವು ಸೇರಿದಂತೆ ಎಲ್ಲಾ ರೀತಿಯ ಪ್ರೋತ್ಸಾಹ ನೀಡಿದ ಗುರುಗಳಾದ **ಡಾ. ಎಂ. ತಳವಾರ್** ಅವರಿಗೆ ಚಿರಋಣಿ ಈ ನಿಬಂಧವನ್ನು ರಚಿಸಲು ಹಲವು ಮಾಹಿತಿಗಳನ್ನು ನೀಡಿದ ಕಬ್ಬಳಿ ಗ್ರಾಮದ ಬಸವೇಗೌಡರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಸಹಕಾರ ನೀಡಿದ ಗೆಳೆಯ ರಾಘವೇಂದ್ರ, ಶ್ರೀಯುತ ವೆಂಕಟೇಶ್ ಹಾಗೂ ನನ್ನ ತಂದೆ–ತಾಯಿಗಳನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

| ಪರಿವಿಡಿ | ಪುಟಸಂಖ್ಯೆ |
|---|---|

ಅಧ್ಯಾಯ 1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ವಿಶ್ವದಲ್ಲಿಯೇ ಅತಿ ಹೆಚ್ಚು ಹಳ್ಳಿಗಳಿಂದ ಕೂಡಿದ ದೇಶ ಭಾರತ. ನಮ್ಮ ದೇಶದ ಹೃದಯವೆಂದರೆ ಹಳ್ಳಿಗಳ ಸಮುಚ್ಚಯ. ದೇಶದ ಯಾವುದೇ ಭಾರತದಲ್ಲಿ ಸಂಚರಿಸಿದರೂ ಹಳ್ಳಿಗಳಿಲ್ಲದ ರಾಜ್ಯ ಕಾಣ ಸಿಗುವುದಿಲ್ಲ. ಪ್ರತಿ ಹಳ್ಳಿಯಲ್ಲು ತಮ್ಮದೇ ಆದ ಸಂಪ್ರದಾಯಗಳನ್ನು ರೂಢಿಸಿಕೊಂಡು ಬದುಕುತ್ತಿರುವ ಜನಸಮುದಾಯಗಳಿವೆ. ದೇಶದ ಪ್ರಗತಿಯಲ್ಲಿ ಹಳ್ಳಿಗಾಡಿನ ಕೊಡುಗೆ ಬಹಳ ದೊಡ್ಡದು ಭಾರತೀಯ ಬದುಕಿಗೂ ಹಳ್ಳಿಗಾಡಿಗೂ ಎಡಬಿಡದೆ ನಂಟಿದೆ. ಒಂದು ಊರಿನ ಸಾಂಸ್ಕೃತಿಕ ಅಧ್ಯಯನ ದೇಶದ ಸಾಂಸ್ಕೃತಿಕತೆಗೆ ಪ್ರವೇಶವೂ ಹೌದು. ಒಟ್ಟಾರೆ ಒಂದು ಹಳ್ಳಿಯ ಸಾಂಸ್ಕೃತಿಕ ಅಧ್ಯಯನವೆಂದರೆ ಅಲ್ಲಿ ಬಾಳಿದ ಜನರ ಬದುಕಿನ ಅಧ್ಯಯನ ಎಂದು ಹೇಳಬಹುದು. ಆ ಊರ ಜನರ ನೋವು, ನಲಿವು, ಸುಖ-ದುಖಃ, ರೀತಿ, ನೀತಿ ಮೊದಲಾದವು ಆ ಅಧ್ಯಯನದಲ್ಲಿ ಮಡುಗಟ್ಟಿರುತ್ತದೆ.

ಬಾಲ್ಯದಿಂದಲೂ ಕುತೂಹಲ ಉಂಟುಮಾಡಿ ಚಿಂತನೆಗೂ ನಿಲುಕದ ರೀತಿಯಲ್ಲಿ ವಿಸ್ತರಿಸುವ ಆಚರಣೆ ನಂಬಿಕೆಗಳನ್ನು ಕುರಿತು ಬರೆಯಬೇಕೆಂದು ನನ್ನಲ್ಲಿ ಹುಟ್ಟಿದ ಆಸಕ್ತಿಗೆ ಇಂದು ಜೀವ ದೊರಕಿದೆ. ಆದ್ದರಿಂದ ಶ್ರೀ ಕ್ಷೇತ್ರದ ವಿಚಾರಗಳಿಗೆ ಅಕ್ಷರ ರೂಪ ಕೊಡಲು ಪ್ರಯತ್ನಿಸಿದ್ದೇನೆ. ಒಂದು ಊರಿನ ಸರ್ವತೋಮುಖ ಅಧ್ಯಯನಕ್ಕೆ ನಮಗೆ ಲಿಖಿತ ಆಧಾರಗಳಾದ ಶಾಸನಗಳು, ಸಾಹಿತ್ಯ ಕೃತಿಗಳು ಅಲಿಖಿತ ಆಧಾರಗಳಾದ ಸ್ಮಾರಕಗಳು ಕಲೆ ಮತ್ತು ವಾಸ್ತು ಶಿಲ್ಪಗಳು ಜನಪದರ ಮಾತುಗಳು ಮಹತ್ವಪೂರ್ಣ ಆಕರಗಳಾಗಿವೆ. ಒಂದು ಪ್ರದೇಶದ ಅಥವಾ ಒಂದು ಕ್ಷೇತ್ರದ ಅಧ್ಯಯನ ಎಂದರೆ ಆಯಾ ನಿರ್ದಿಷ್ಟ ಪ್ರದೇಶ ಅಥವಾ ಕ್ಷೇತ್ರದ ಜನ ಪ್ರಾಚೀನ ಕಾಲದ ಜೊತೆ ಆಧುನಿಕತೆಯನ್ನು ಅಳವಡಿಸಿಕೊಂಡು ಮುಂದುವರಿಸಿಕೊಂಡು ಬರುತ್ತಲಿರುವ ಜೀವನ ವಿಧಾನ ಆಚಾರ ನಂಬಿಕೆ ರೂಢಿ ಸಂಪ್ರದಾಯ ಮತ್ತು ಅವುಗಳ ವಿಶೇಷತೆಯನ್ನು ಅರಿಯುವುದಾಗಿದೆ. ಆದುದರಿಂದ ಶ್ರೀ ಕ್ಷೇತ್ರದ ಅಧ್ಯಯನಕ್ಕೆ ವಿಶೇಷ ಸ್ಥಾನಮಾನವಿದೆ. ಕರ್ನಾಟಕ ಸಂಸ್ಕೃತಿ ಅಧ್ಯಯನದಲ್ಲಿ ಗ್ರಾಮ ಜೀವನದ ಅಧ್ಯಯನಕ್ಕೆ ವಿಶೇಷ ಸ್ಥಾನಮಾನವಿದೆ. ಕರ್ನಾಟಕ ಜಾನಪದ ವಿಶಾಲವಾದುದು. ಹರಿಯ ಬಸುರಿನಲ್ಲಿ ಬ್ರಹ್ಮಾಂಡವಡಗಿರುವಂತೆ

ಜಾನಪದ ಕುಕ್ಷಿಯಲ್ಲಿ ಜಗತ್ತೆಲ್ಲ ಹುಡುಗಿದ ಕರ್ನಾಟಕ ಜಾನಪದೀಯ ಅಧ್ಯಯನದಲ್ಲಿ ಗ್ರಾಮ ಜೀವನದ ಅಧ್ಯಯನಕ್ಕೆ ಚಾಲನೆ ದೊರಕಿದ್ದು 1933 ರಲ್ಲಿ ಅರ್ಚಕ ಬಿ. ರಂಗಸ್ವಾಮಿ ಅವರ ಹುಟ್ಟಿದ ಹಳ್ಳಿಯ ಹಾಡಿನ ಮೂಲಕ ಎಂದು ಗುರುತಿಸಬಹುದು. ಅನಂತರದಲ್ಲಿ ಗೊರೂರು ರಂಗಸ್ವಾಮಿ ಅಯ್ಯಂಗಾರ್, ಎಲ್. ಗುಂಡಪ್ಪ, ಬೆಟಗೇರಿ ಕೃಷ್ಣ ಶರ್ಮ ಮುಂತಾದ ವಿದ್ವಾಂಸರು ಈ ದಿಕ್ಕಿನಲ್ಲಿ ಕೆಲಸ ಮಾಡಿರುವುದನ್ನು ನೆನಪು ಮಾಡಿಕೊಳ್ಳಬಹುದು. ಈ ಬಗೆಯ ಅಧ್ಯಯನದಲ್ಲಿ ಹಳ್ಳಿಯ ಜನರ ಜೀವನ, ನಂಬಿಕೆ, ಕಲೆ, ಸಂಪ್ರದಾಯ, ಆರ್ಥಿಕ ಸ್ಥಿತಿಗತಿ ಇತ್ಯಾದಿ ವಿಚಾರಗಳನ್ನು ಪರಿಚಯಿಸುವುದು ಮುಖ್ಯವೆನಿಸಿಕೊಳ್ಳುತ್ತದೆ.

ಈ ಹಿನ್ನಲೆಯಲ್ಲಿ ಆಲೋಚಿಸಿದಾಗ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಹಿರಿಸಾವೆ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ಕಬ್ಬಳಿ ಗ್ರಾಮವು ಶ್ರೀ ಕ್ಷೇತ್ರವಾಗಿ ರೂಪಗೊಂಡ ಬಗೆ ಇಲ್ಲಿಯ ಜನಜೀವನ, ಪ್ರಮುಖ ಆಚರಣೆಗಳು, ದೇವಾಲಯಗಳನ್ನು, ನಂಬಿಕೆಗಳನ್ನು ಪರಿಚಯಿಸುವ ಉದ್ದೇಶದಿಂದ ಈ ನಿಬಂಧವನ್ನು ರಚಿಸಿದ್ದೇನೆ. ಕಬ್ಬಳಿಯ ಊರ ಹೊರವಲಯದಲ್ಲಿರುವ ಶ್ರೀ ಬಸವೇಶ್ವರ ದೇವಾಲಯ ಈ ನಿಬಂಧದ ಹಾಗೂ ಹಳ್ಳಿಯ ಜನರ ಕೇಂದ್ರ ಬಿಂದು ಈ ದೇವರ ಸುತ್ತ ಹರಡಿಕೊಂಡಿರುವ ದಂತಕತೆಗಳು ಕುತೂಹಲ ಕೆರಳಿಸುವ ಸಂಗತಿಗಳು ದಿನದಿಂದ ದಿನಕ್ಕೆ ಸೂಜಿಗಲ್ಲಿನಂತೆ ಜನರನ್ನು ತನ್ನೆಡೆಗೆ ಆಕರ್ಷಿಸುವ ಶ್ರೀ ಕ್ಷೇತ್ರದ ಸ್ವರೂಪ, ಇಲ್ಲಿನ ಜನರ ಜೀವನ ಮೊದಲಾದ ಹತ್ತು ಹಲವು ವಿಷಯಗಳನ್ನು ದಾಖಲು ಮಾಡುವುದೇ ಈ ನಿಬಂಧದ ಪ್ರಮುಖ ಧ್ಯೇಯ.

ಮಾನವ ಜಗತ್ತಿನಲ್ಲಿ ಕುತೂಹಲಿಯಾಗಿ ನೋಡುವ ಮನಸ್ಸುಗಳಿಗೆ ಪ್ರತಿಯೊಂದು ಘಟನೆ ನಂಬಿಕೆ ಆಚರಣೆಗಳು ವಿಸ್ಮಯವೇ ಸರಿ. ಮನುಷ್ಯ ಹುಟ್ಟಿದಂದಿನಿಂದ ಸಾಯುವವರೆಗೂ ಹಲವು ನಂಬಿಕೆಗಳ ಮೆಟ್ಟಿಲುಗಳ ಮೇಲೆ ಬದುಕಿನ ದಂತಗೋಪುರವನ್ನು ಏರಲು ಬಯಸುತ್ತಾನೆ. ಆ ಮೆಟ್ಟಿಲುಗಳಲ್ಲಿ ಕೆಲವೊಂದು ಸತ್ಯದ ಪ್ರತೀಕಗಳಾಗಿಯೂ ಉಳಿದುಬಂದಿದೆ. ಅವುಗಳ ದಾಖಲು ಮಾಡುವುದು ಸಾಂಸ್ಕೃತಿಕ ಅಧ್ಯಯನವೆನಿಸುತ್ತದೆ. ನಾನೂ ಕೂಡ ಗ್ರಾಮೀಣ ಮಣ್ಣಿನ ಸೊಗಡನ್ನು ಸವಿದು ಬೆಳೆದವನಾದ್ದರಿಂದ ಜೊತೆಗೆ ತಂದೆ ತಾಯಿಗಳ ಆಶೀರ್ವಾದದ ಬಲದಿಂದ ಈ ಎಲ್ಲಾ ಆಚಾರಗಳನ್ನು ಒರೆಹಚ್ಚಿ ನೋಡುವ ಶೈಕ್ಷಣಿಕ ವಾತಾವರಣ ದೊರೆತುದರಿಂದ ಚಿಕ್ಕಂದಿನಿಂದ ನೋಡುತ್ತಾ ಬಂದಿರುವ ಶ್ರೀ ಕ್ಷೇತ್ರದ ಹಲವು ವಿಚಾರಗಳನ್ನು ಈ ನಿಬಂಧದಲ್ಲಿ ಪ್ರಸ್ತುತಪಡಿಸಿದ್ದೇನೆ.

ಅಧ್ಯಾಯ–2

## ಶ್ರೀ ಕ್ಷೇತ್ರದ ಭೌಗೋಳಿಕ ಹಿನ್ನಲೆ

ಒಂದು ದೇಶಕ್ಕೆ ತನ್ನದೇ ಆದ ಇತಿಹಾಸವಿರುವಂತೆ ಭೌಗೋಳಿಕ ಹಿನ್ನಲೆಯೂ ಇರುತ್ತದೆ. ಭೂಮಿ, ಜನಸಂಖ್ಯೆ, ಹವಾಗುಣ, ಪರಿಸರ, ಮಳೆ, ಬೆಳೆ,ಆಹಾರ ಪದ್ಧತಿಗಳು ಆಯಾ ಭೌಗೋಳಿಕ ಪ್ರದೇಶದ ಹಿನ್ನಲೆಯಲ್ಲಿ ರೂಪುಗೊಂಡು ಬೆಳೆದು ಬಂದಿರುತ್ತದೆ. ಇದು ಆಯಾ ಪ್ರದೇಶದ ಪರಿಸರಕ್ಕೆ ಅನುಗುಣವಾಗಿ ವೈವಿಧ್ಯತೆಯಿಂದ ಕೂಡಿರುತ್ತದೆ.

ಈ ಹಿನ್ನಲೆಯಲ್ಲಿ ಆಲೋಚಿಸಿದಾಗ ಶ್ರೀ ಕ್ಷೇತ್ರವಾಗಿ ರೂಪುಗೊಂಡಿರುವ ಕಬ್ಬಳಿ ಮತ್ತು ಅದರ ಸುತ್ತಮುತ್ತಲ ಪ್ರದೇಶ ಮತ್ತು ಜನರ ನಡಾವಳಿಗಳ ಬಗ್ಗೆ ಅರಿಯುವುದು ಉಚಿತವೆನಿಸುತ್ತದೆ. ಕರ್ನಾಟಕ ರಾಜ್ಯದಲ್ಲಿ ಹಾಸನ ಜಿಲ್ಲೆಗೆ ತನ್ನದೇ ಆದ ವಿಶೇಷತೆಯಿದ್ದು, ಹಲವು ಪ್ರಥಮಗಳ ಜಿಲ್ಲೆಯೂ ಆಗಿದೆ. ಈ ಜಿಲ್ಲೆಯ ಹಲವು ವಿಶಿಷ್ಟ ಹಾಗೂ ಪ್ರಭಾವಿ ಗ್ರಾಮಗಳಲ್ಲಿ ಚನ್ನರಾಯಪಟ್ಟಣ ತಾಲ್ಲೂಕು, ಹಿರೀಸಾವೆ ಹೋಬಳಿಯಲ್ಲಿ ಕಂಡು ಬರುವ ಕಬ್ಬಳಿಯು ಒಂದು ಪ್ರಮುಖ ಹಾಗೂ ಪ್ರಭಾವಿ ಗ್ರಾಮ. ಇದು ಹಾಸನದಿಂದ ಪೂರ್ವಕ್ಕೆ 70 ಕಿ.ಮಿ., ಚನ್ನರಾಯಪಟ್ಟಣದಿಂದ 30 ಕಿ.ಮಿ. ದೂರದಲ್ಲಿದ್ದು, ಈ ಗ್ರಾಮವನ್ನು ಪ್ರವೇಶಿಸುತ್ತಿದ್ದಂತೆ ಸಂಪೂರ್ಣವಾಗಿ ಹಳ್ಳಿಯ ದೃಶ್ಯವು ಕಂಡುಬರುತ್ತದೆ. ಜಿಲ್ಲೆಯ ಗಡಿಭಾಗದಲ್ಲಿರುವ ಈ ಕ್ಷೇತ್ರಕ್ಕೆ ತಾಲ್ಲೂಕು ಕೇಂದ್ರಗಳಾದ ತಿಪಟೂರು, ತುರುವೇಕೆರೆ ಸಮಾನ ದೂರದಲ್ಲಿವೆ.

ಕಬ್ಬಳಿ ಕ್ಷೇತ್ರದ ಸುಮಾರು 500–600 ಮನೆಗಳಿದ್ದು, 1500–2000 ಜನಸಂಖ್ಯೆಯಿಂದ ಕೂಡಿದ ಗ್ರಾಮವಾಗಿದೆ. ಆಧುನಿಕತೆಯ ಎಲ್ಲಾ ಅಂಶಗಳೂ ಸ್ಪರ್ಶಿಸಿದ್ದರೂ ಪ್ರಾಚೀನ ಕುರುಹುಗಳು ನಶಿಸಿಲ್ಲ. ಇಲ್ಲಿನ ಮನೆಗಳು ತುಂಬಾ ವಿಶಿಷ್ಟವಾಗಿದ್ದು, ಜೋಪಡಿಯಿಂದ ಇಳಿದು ಮಹಡಿ ಮನೆ ಮಾದರಿಯ ವಿವಿಧ ಸ್ವರೂಪದ ಮನೆಗಳು ಕಂಡುಬರುತ್ತವೆ. ಇತ್ತೀಚಿನ ದಿನಗಳಲ್ಲಿ ಕಾಡುಕಲ್ಲುಗಳನ್ನು ಬಳಸಿ ಕಟ್ಟಲಾದ ಮನೆಗಳ ಅವನತಿ ಅಧಿಕವಾಗಿದ್ದರೂ ಅಲ್ಲಲ್ಲಿ ಒಂದೆರಡು ಮನೆಗಳು ಕಂಡುಬರುತ್ತವೆ. ಕೈಹಂಚಿನ ಮನೆಗಳು, ನಾಡಹಂಚಿನ ಮನೆಗಳು ಈ ಗ್ರಾಮದಲ್ಲಿ ಅಧಿಕವಾಗಿರುವುದನ್ನು ಗಮನಿಸಬಹುದು. ಈ ಗ್ರಾಮದಲ್ಲಿರುವ ಕಲ್ಲಿನಿಂದಲೇ

ನಿರ್ಮಾಣವಾಗಿರುವ ಛಾವಣಿಗಳು ನಮ್ಮ ಪ್ರಾಚೀನ ಮನೆಗಳ ಸ್ವರೂಪವನ್ನು ನೆನಪಿಗೆ ತರುತ್ತವೆ. ಸಮರ್ಪಕ ಗಾಳಿ, ಬೆಳಕು ಸುಳಿಯದ ಈ ಮನೆಗಳಿಗೆ ಕಲ್ಲಿನಿಂದಲೇ ಮಾಡಿದ ಗೂಡಿನಾಕಾರದ ಕಿಟಕಿಗಳು ಇವೆ. ಮನೆಯ ಹಿರಿಯರಿಂದ " ಬೆಳಕಿನ ಗೂಡುಗಳೆಂದು ಹೆಸರಿಸಲ್ಪಟ್ಟಿವೆ. ಈಗಲೂ ಇಲ್ಲಿನ ಹಲವು ಜನರು ಪುರಾತನ ಸಂಪ್ರದಾಯಗಳಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿರುವಂತೆ ತೋರುವುದಿಲ್ಲ.

**ಜನರ ಲಕ್ಷಣಗಳು :**

ಇಲ್ಲಿನ ಹೆಚ್ಚಿನ ಜನರು ಕಪ್ಪುಮಿಶ್ರಿತ ಗೋಧಿ ಮೈಬಣ್ಣ ಹೊಂದಿದವರಾಗಿದ್ದು, ಭಾರತೀಯ ಜನಸಮುದಾಯದ ಪ್ರತಿನಿಧಿಗಳಾಗಿದ್ದಾರೆ. ಇಲ್ಲಿನ ಜನರನ್ನು ಮಾತನಾಡಿಸಿದಾಗ ಉತ್ತಮ ನಡೆ–ನುಡಿ, ಗೌರವ ಭಾವನೆ ಇರುವುದು ಕಂಡುಬರುತ್ತದೆ.

ಹೆಂಗಸರು ಭಾರತೀಯ ಸಂಪ್ರದಾಯದಂತೆ ಸೀರೆ ಉಡುವುದು ಹಾಗೂ ಗಂಡಸರು ಶರ್ಟ್, ಪಂಚೆ ಅಥವಾ ಚಡ್ಡಿ ಧರಿಸುವುದನ್ನು ಗಮನಿಸಬಹುದು. ಆದರೆ ಆಧುನಿಕತೆಯ ಸ್ಪರ್ಶಕ್ಕೆ ಒಳಗಾಗಿರುವ ಯುವಜನತೆ ಇಂದಿನ ಆಧುನಿಕ ವೇಷಭೂಷಣಕ್ಕೆ ಮಾರುಹೋಗಿದ್ದಾರೆ. ಈಗಲೂ ಈ ಗ್ರಾಮದಲ್ಲಿ ಮೈಗೆ ಅರ್ಧರ್ದ ಬಟ್ಟೆ ಧರಿಸಿ ಓಡಾಡುವ ತಲೆಮಾರುಗಳಿವೆ. ಕುಪ್ಪಸ ತೊಡದ ಅಜ್ಜಿಯರಿದ್ದಾರೆ. ಆದರೆ ಇವರ ಮಕ್ಕಳು, ಮೊಮ್ಮಕ್ಕಳು ಆಧುನಿಕತೆಗೆ ಹೊಂದಿಕೊಂಡಿರುವುದು ನಿಜಸಂಗತಿ.

**ಹವಾಗುಣ :**

ಬಯಲು ಪ್ರದೇಶದ ಗ್ರಾಮವಾಗಿರುವ ಕಬ್ಬಳಿ ಉತ್ತಮ ಹವಾಗುಣದಿಂದ ಕೂಡಿರುತ್ತದೆ. ಕೆಲವೊಮ್ಮೆ ಮಳೆಗಿಂತಲೂ ಬಿಸಿಲೇ ಅಧಿಕವಾಗಿರುತ್ತದೆ. ಜೂನ್–ಜುಲೈ ತಿಂಗಳಿನಲ್ಲಿ ಮಳೆಯ ಪ್ರಮಾಣ ಕಡಿಮೆ. ಬೇಸಿಗೆಯ ಸಮಯದಲ್ಲಿ ಬಿಸಿಲು ಸುಮಾರು $40^0$–$45^0$C ನಷ್ಟು ಇರುತ್ತದೆ. ಬಿರುಗಾಳಿಯ ಅನುಭವ ಈ ಪ್ರದೇಶಕ್ಕಿಲ್ಲದಿದ್ದರೂ ಬಿರುಬೇಸಿಗೆಯೂ ಅಲ್ಲದ ಅತಿಮಳೆಗಾಲವೂ ಅಲ್ಲದ ಕಡು ಶೀತ(ಚಳಿ)ವೂ ಅಲ್ಲದ ಉತ್ತಮ ಹವಾಗುಣ ಕಾಲಕಾಲಕ್ಕೆ ಕಂಡು ಬಂದರೂ,

ಬೇಸಿಗೆಯ ಅನುಭವವೇ ಹೆಚ್ಚು ಎನ್ನಬಹುದು.

**ಕೃಷಿ** :

ಕಬ್ಬಳಿಯು ಕೃಷಿ ಪ್ರಧಾನ ಗ್ರಾಮವಾಗಿದೆ. ಇಲ್ಲಿನ ಭೂಮಿ ಕೆಂಪು ಮಣ್ಣಿನಿಂದ ಕೂಡಿದೆ. ಬಹುಪಾಲು ಕುಟುಂಬಗಳು ಮಳೆಆಶ್ರಿತ ಕೃಷಿ ಭೂಮಿ ಹೊಂದಿವೆ. ಅಂದರೆ ಇಲ್ಲಿ ಮಳೆಯಾದರೇ ಮಾತ್ರ ವರ್ಷಕ್ಕಾಗುವಷ್ಟು ಆಹಾರ ಪದಾರ್ಥಗಳನ್ನು ಬೆಳೆಯಬಹುದು ಮಳೆಯನ್ನೇ ನೆಚ್ಚಿಕೊಂಡು ಕೃಷಿಯಾಧಾರಿತ ಬಹುಸಂಖ್ಯೆಯ ಕುಟುಂಬಗಳು ಇಲ್ಲಿವೆ. ತೆಂಗು,ರಾಗಿ ಮತ್ತು ಜೋಳ ಇಲ್ಲಿನ ಪ್ರಮುಖ ಬೆಳೆಗಳಾಗಿವೆ. ವ್ಯವಸಾಯವು ಸಂಪ್ರದಾಯದ ರೀತಿಯಲ್ಲೆ ಇದೆ. ಆದರೆ ಇತ್ತೀಚಿನ ದಿನಗಳಲ್ಲಿ ಆಧುನಿಕ ತಂತ್ರಜ್ಞಾನಗಳನ್ನು ಬಳಸಿ ವ್ಯವಸಾಯ ಮಾಡುವುದು ಹೆಚ್ಚಾಗುತ್ತಿದೆ.

ಇತ್ತೀಚಿನ ವರ್ಷಗಳಲ್ಲಿ ಕೆಲವರು ಆಧುನಿಕವಾಗಿ ಕೊಳವೆಬಾವಿಗಳನ್ನು ತೋಡಿಸಿದ್ದು, ಅದರಿಂದ ಆರ್ಥಿಕ ಬೆಳೆಗಳಾದ ಆಲೂಗೆಡ್ಡೆ,ಕಬ್ಬುಗಳನ್ನು ಬೆಳೆಯುವುದಲ್ಲದೆ ಟೊಮೋಟೋ,ಹುರುಳಿ,ಮೆಣಸಿನಕಾಯಿ,ಮೊದಲಾದ ತರಕಾರಿಗಳನ್ನು ವ್ಯಾಪಾರಕ್ಕಾಗಿಯೆ ಬೆಳೆದು ಮಾರಾಟ ಮಾಡುತ್ತಿದ್ದಾರೆ. ಕೆಲವು ಕುಟುಂಬಗಳು ಮಳೆಯನ್ನೇ ನಂಬಿಕೊಂಡಿವೆ. ಕೃಷಿಯು ಪ್ರಧಾನವಾಗಿ ಮಳೆಯನ್ನೆ ನೆಚ್ಚಿಕೊಂಡಿರುವುದರಿಂದ, ಇಲ್ಲಿನ ಬಹುಪಾಲು ಜನರು ಆರ್ಥಿಕವಾಗಿ ಸದೃಢ ಮತ್ತು ಸ್ವಾವಲಂಬಿಗಳಾಗಿಲ್ಲ. ತೆಂಗು, ಪ್ರಮುಖ ಆರ್ಥಿಕ ಬೆಳೆಯಾಗಿದ್ದರೂ ನೀರಾವರಿ ಸೌಲಭ್ಯದ ಕೊರತೆಯಿಂದ ಉತ್ತಮವಾದ ಫಲ ನೀಡುತ್ತಿಲ್ಲ. ಗಳಿಸಿ, ಉಳಿಸಿದ ತೆಂಗಿನಕಾಯಿಗಳನ್ನು ಕೊಬ್ಬರಿ ಮಾಡಿ ತಿಪಟೂರಿನ ಮಾರುಕಟ್ಟೆಯಲ್ಲಿ ಮಾರಾಟ ಮಾಡಿ ಹಣ ಗಳಿಸುತ್ತಾರೆ.

**ಹೈನುಗಾರಿಕೆ** :

ಆಧುನಿಕವಾಗಿ ಇಲ್ಲಿನ ಜನರು ಆರ್ಥಿಕ ಸದೃಢತೆಯನ್ನು ಸಾಧಿಸಲು ಕೃಷಿಯ ಜೊತೆಗೆ ವಿವಿಧ ಉಪಕಸುಬುಗಳನ್ನು ಕಂಡುಕೊಂಡಿದ್ದಾರೆ. ಅದರಲ್ಲಿ ಹೈನುಗಾರಿಕೆಯು ಪ್ರಮುಖವಾದುದು. ಕಬ್ಬಳಿಯಲ್ಲಿಯೇ ಹಾಲು ಉತ್ಪಾದಕರ ಸಹಕಾರಿ ಸಂಘವಿದೆ. ಸುಮಾರು

50 ರಿಂದ 100 ಸೀಮೆಹಸುಗಳನ್ನು ಸಾಕಿರುವ ಇಲ್ಲಿನ ಜನರು ಪ್ರತಿದಿನ 500 ಲೀಟರ್ ಹಾಲು ಸಂಗ್ರಹಿಸುತ್ತಾರೆ. ಪರಿಣಾಮವಾಗಿ ಜನರ ಹಣಗಳಿಕೆ ಸ್ವಲ್ಪ ಸುಧಾರಿಸಿದೆ ಮತ್ತು ಜನರ ದಿನನಿತ್ಯದ ಬದುಕಿಗೆ ಪ್ರಮುಖ ಆಸರೆಯಾಗಿದೆ. ಇಲ್ಲಿನ ಹಾಲು ಸಂಗ್ರಹ ಕೇಂದ್ರದಿಂದ ಪ್ರತಿ 15 ದಿನಗಳಿಗೊಮ್ಮೆ ಹಣಸಂದಾಯ ಮಾಡಲಾಗುತ್ತದೆ. ಕೇವಲ ಹಸುಗಳನ್ನಷ್ಟೇ ಅಲ್ಲದೆ ಕುರಿ,ಕೋಳಿ ಸಾಕುವುದನ್ನು ಕೂಡ ಉಪಕಸುಬಾಗಿ ರೂಢಿಸಿಕೊಂಡಿದ್ದಾರೆ.

**ಬ್ಯಾಂಕ್ ವ್ಯವಸ್ಥೆ :**

ಈ ಗ್ರಾಮದಲ್ಲಿ ಸುಮಾರು 30 ವರ್ಷಗಳಿಂದ ಕಾವೇರಿ ಗ್ರಾಮೀಣ ಬ್ಯಾಂಕ್‌ನ ಶಾಖೆಯೊಂದು ಕೆಲಸ ಮಾಡುತ್ತಿದ್ದು, ಸುತ್ತಮುತ್ತಲಿನ ಗ್ರಾಮಗಳ ಜನರ ಹೈನುಗಾರಿಕೆ, ವ್ಯವಸಾಯ, ಇತ್ಯಾದಿ ವ್ಯವಹಾರಗಳಿಗೆ ಆಸರೆಯ ಸೂರಾಗಿ ನಿಂತಿದೆ. ಈ ಬ್ಯಾಂಕಿನಿಂದ ಸಾಲ–ಸೌಲಭ್ಯ ಪಡೆವ ರೈತ ಸಮುದಾಯ ಹೆಚ್ಚಾಗಿ ಹೈನುಗಾರಿಕೆ ಹಾಗೂ ಕೊಳವೆಬಾವಿ ನೀರಾವರಿ ಸೌಲಭ್ಯ ಮಾಡಿಕೊಂಡಿರುತ್ತಾರೆ. ಬ್ಯಾಂಕಿನ ವ್ಯವಹಾರವನ್ನು ಸುಸೂತ್ರವಾಗಿ ನಡೆಸುವ ಜನರು ಸಾಲ ಪಡೆದು ಮತ್ತು ಮರುಪಾವತಿಸುವಲ್ಲಿ ನಂಬಿಕೆಯಿಂದ ನಡೆದುಕೊಳ್ಳುತ್ತಾರೆ. ಬ್ಯಾಂಕ್ ಕೂಡ ಜನರ ನಂಬಿಕೆಗೆ ಬೆಂಬಲವಾಗಿ ನಿಂತಿದೆ.

ಹೆಚ್ಚಿನ ಸಾಲಬೇಕೆಂದರೆ ಚನ್ನರಾಯಪಟ್ಟಣ,ನುಗ್ಗೇಹಳ್ಳಿ ಬ್ಯಾಂಕ್‌ಗಳಿಗೆ ಶಿಫಾರಸ್ಸು ಮಾಡುತ್ತಾರೆ. ಅಲ್ಲದೆ ವ್ಯವಸಾಯಗಾರರು ಮತ್ತು ಕೂಲಿಕಾರ್ಮಿಕರು ಹಣ ಉಳಿತಾಯವನ್ನು ಈ ಬ್ಯಾಂಕಿನಲ್ಲಿ ಮಾಡುತ್ತಾರೆ. ಸ್ತ್ರೀಶಕ್ತಿ ಸಂಘಗಳು ಸಹ ಹೆಚ್ಚಿನ ಪ್ರಮಾಣದಲ್ಲಿ ಹಣ ಉಳಿತಾಯ ಮಾಡಲು ಬ್ಯಾಂಕ್ ಪ್ರೋತ್ಸಾಹಿಸುತ್ತದೆ.

**ನ್ಯಾಯ ಬೆಲೆ ಅಂಗಡಿ :**

ರಾಜ್ಯ ಸರಕಾರದ ವತಿಯಿಂದ ನೀಡಿರುವ ನ್ಯಾಯಬೆಲೆ ಅಂಗಡಿಗಳು ಕಬ್ಬಳಿಯಲ್ಲೂ ಸಹ ಇದ್ದು, ಪ್ರಾರಂಭದಲ್ಲಿ ಎರಡು ನ್ಯಾಯ ಬೆಲೆ ಅಂಗಡಿಗಳಿದ್ದವು. ಈಗ ಕೇವಲ ಒಂದು ಅಂಗಡಿ ಮಾತ್ರ ಕಾರ್ಯನಿರತವಾಗಿದೆ. ಈ ಊರಿನಲ್ಲಿರುವ ಬಹುತೇಕ ಬಡವರಿಗೆ ನ್ಯಾಯಬೆಲೆ ಅಂಗಡಿಯಿಂದ ಪ್ರಯೋಜನವಾಗುತ್ತಿದೆ.

## ಕುಡಿಯುವ ನೀರಿನ ವ್ಯವಸ್ಥೆ :

ಜನರಿಗೆ ಆಹಾರ,ಗಾಳಿಯಷ್ಟೆ ಪ್ರಮುಖವಾದುದು ಕುಡಿಯುವ ನೀರಿನ ಸೌಲಭ್ಯ. ಕಬ್ಬಳಿ ಗ್ರಾಮದಲ್ಲಿ ಪ್ರಾರಂಭದ ದಿನಗಳಲ್ಲಿ ಕುಡಿಯುವ ನೀರಿನ ಸೌಲಭ್ಯ ಅಷ್ಟೇನೂ ಸಮರ್ಪಕವಾಗಿರಲಿಲ್ಲ. ಹಿಂದಿನ ಕಾಲದಲ್ಲಿ ಕುಡಿಯುವ ನೀರಿಗಾಗಿ ಮಣ್ಣುಬಾವಿಗಳು, ಕಲ್ಲುಬಾವಿಗಳು, ಕಲ್ಯಾಣಿಗಳನ್ನು ಊರಿನ ಜನರೇ ಸ್ವತಃ ತೋಡಿಕೊಂಡಿದ್ದರು. ಗ್ರಾಮದ ನಡುಭಾಗದಲ್ಲಿದ್ದ ಸಿಹಿ ನೀರಿನ ಸೇದುವ ಬಾವಿಯೇ ಪ್ರಮುಖವಾಗಿ ಇಡೀ ಗ್ರಾಮದ ನೀರಿನ ಮೂಲವಾಗಿತ್ತು. ಬೇಸಿಗೆ ಬಂತೆಂದರೆ ಈ ಬಾವಿಗಳಲ್ಲೂ ನೀರು ಬತ್ತಿಹೋಗಿ ನೀರಿನ ತೊಂದರೆ ಉಂಟಾಗುತ್ತಿತ್ತೆಂದು ಗ್ರಾಮದ ಹಿರಿಯರಾದ ಶ್ರೀ ಬಸವೇಗೌಡರು ಹೇಳುತ್ತಾರೆ. ಕಾಲಕ್ರಮೇಣ ರಾಜಕೀಯ ಹಾಗೂ ಸರ್ಕಾರಿ ಸೌಲಭ್ಯದ ದೆಸೆಯಿಂದ ಗ್ರಾಮಕ್ಕೆ ಕೊಳವೆಬಾವಿಗಳ ಸೌಲಭ್ಯ ಉಂಟಾಗಿದೆ. ಆದರೂ ಕೆಲವೊಂದು ವರ್ಷಗಳಲ್ಲಿ ನೀರಿಗೆ ತೊಂದರೆಯುಂಟಾಗುತ್ತದೆ. ಅದಕ್ಕೆ ಪ್ರಮುಖ ಕಾರಣ ಅಂತರ್‌ಜಲದ ಮಟ್ಟ ಕುಸಿಯುತ್ತಿರುವುದು. ಅಲ್ಲದೆ ಮಳೆಯ ಪ್ರಮಾಣ ತುಂಬಾ ಕಡಿಮೆಯಿರುವುದಲ್ಲದೆ ಗ್ರಾಮದ ಸುತ್ತಮುತ್ತ ಯಾವುದೇ ನಾಲೆಯ ವ್ಯವಸ್ಥೆ, ದೊಡ್ಡ ಕೆರೆ,ಕಟ್ಟೆಗಳ ಸೌಲಭ್ಯವಿಲ್ಲದಿರುವುದೂ ಸಹ ಪ್ರಮುಖ ಕಾರಣವಾಗಿದೆ. ಅಂದು ಕುಡಿಯುವ ನೀರಿಗಾಗಿ ಬಳಸುತ್ತಿದ್ದ ಕಲ್ಲುಬಾವಿಗಳು, ಮಣ್ಣುಬಾವಿಗಳು ಈಗಲೂ ನಮಗೆ ಸಾಕ್ಷ್ಯ ಒದಗಿಸುತ್ತವೆ. ಅಂತಹ ಬಾವಿಗಳಲ್ಲಿ ಹಲವು ಇಂದು ನೀರಿಲ್ಲದೆ ಸಂಪೂರ್ಣ ಬತ್ತಿ ಹೋಗಿರುವುದನ್ನು ನಾವು ಗಮನಿಸಬಹುದಾಗಿದೆ.

## ಆಹಾರ ಪದ್ಧತಿ :

ಕಬ್ಬಳಿಯ ಗ್ರಾಮದಲ್ಲಿ ಪ್ರಾಚೀನ ಆಹಾರ ಪದ್ಧತಿಯನ್ನು ಇಂದಿಗೂ ಕೈಬಿಟ್ಟಿಲ್ಲವೆಂಬುದು ವಿಶೇಷ ಸಂಗತಿಯಾಗಿದೆ. ಮನುಷ್ಯ ನವನಾಗರಿಕನಾದಂತೆ ಆಹಾರ ಪದ್ಧತಿಗಳಲ್ಲೂ ಬದಲಾವಣೆ ಉಂಟಾಗಿರುವುದು ಕಂಡುಬಂದರೂ ಹೆಚ್ಚಿನ ವ್ಯತ್ಯಾಸಗಳು ಈ ಭಾಗದಲ್ಲಿ ಉಂಟಾಗಿಲ್ಲ. ರಾಗಿ ಇಲ್ಲಿನ ಪ್ರಮುಖ ಆಹಾರ ಧಾನ್ಯವಾಗಿರುವುದರಿಂದ ಆಹಾರಕ್ಕಾಗಿ ರಾಗಿಯನ್ನೇ ಹೆಚ್ಚಾಗಿ ಬಳಸುವುದುಂಟು. ಬೆಳಗಿನ ತಿಂಡಿಗೆ ಇಂದಿಗೂ ಅಧಿಕ ಕುಟುಂಬಗಳು ರಾಗಿರೊಟ್ಟಿ ಮತ್ತು ಕಾಯಿಚಟ್ನಿಯನ್ನೇ ಮಾಡಿದರೆ, ಮದ್ಯಾಹ್ನ ಮತ್ತು ಸಂಜೆ ರಾಗಿ ಮುದ್ದೆ

ಮಾಡುತ್ತಾರೆ. ರಾಗಿಮುದ್ದೆ, ರೊಟ್ಟಿ, ಸೊಪ್ಪಿನಸಾರು, ಗೊಡ್ಡುಗಾರ, ಹೀಗೆ ಹತ್ತು ಹಲವು ಬಗೆಯ ಆಹಾರ ಪದಾರ್ಥಗಳು ತಯಾರಿಸಲ್ಪಡುತ್ತವೆ. ಗೋಧಿ ಮತ್ತು ಅಕ್ಕಿಯನ್ನೂ ಸಹ ಆಹಾರಕ್ಕಾಗಿ ಅಲ್ಪ ಪ್ರಮಾಣದಲ್ಲಿ ಬಳಸುತ್ತಾರೆ. ಆಹಾರವನ್ನು ಬೇಯಿಸಲು ಆಧುನಿಕ ಪಾತ್ರೆಗಳನ್ನು ಬಳಸುತ್ತಾರೆ. ಈಗಲೂ ಕೆಲವು ಬಡವರು ಮತ್ತು ಹೆಚ್ಚಾಗಿ ಹರಿಜನರ ಮನೆಯಲ್ಲಿ ಆಹಾರವನ್ನು ಬೇಯಿಸಲು ಮಣ್ಣಿನಿಂದ ಮಾಡಿದ ಮಡಿಕೆಗಳನ್ನು ಬಳಸುತ್ತಾರೆ. ಕಾರಣ ಕೇಳಿದರೆ "ಬೇಯಿಸುವ ಆಹಾರ ರುಚಿಯಾಗಿರುವುದಲ್ಲದೆ ಕೆಡುವುದಿಲ್ಲ" ಎಂದು ಹೇಳುತ್ತಾರೆ ಈ ಊರಿನ 75 ರ ವೃದ್ಧೆ ಮಾದಮ್ಮ. ಆಧುನಿಕ ಫಾಸ್ಟ್‌ಫುಡ್‌ಗಳನ್ನು ತಿನ್ನುವ ಜನರೂ ಸಹ ಇದ್ದಾರೆ.

## ಜನಪದ ವೈದ್ಯ :

ವೈದ್ಯಪದ್ಧತಿ ಪುರಾತನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಸಾಮಾನ್ಯವಾಗಿ ಪ್ರಾಚೀನ ಕಾಲದಿಂದಲೂ ಹಳ್ಳಿಗೊಬ್ಬ ನಾಟಿ ವೈದ್ಯರಿರುತ್ತಿದ್ದರು. ನಿಸರ್ಗಸಹಜವಾಗಿ ದೊರೆಯುವ ಗಿಡ–ಮರಗಳ ಬೇರು,ಸೊಪ್ಪು, ಎಲೆಗಳಿಂದ ತಯಾರಿಸಿದ ಔಷಧಿಯನ್ನು ತಯಾರಿಸುವ ವೈದ್ಯಕೀಯ ಜ್ಞಾನ ನಮ್ಮ ಪೂರ್ವಿಕರಲ್ಲಿ ಇತ್ತು. ವಿಶೇಷವಾಗಿ ಗ್ರಾಮೀಣರಲ್ಲಿ ಇದನ್ನು ಹಸಿರು ಔಷಧಿಯಂದೇ ಕರೆಯುತ್ತಿದ್ದರು. ಇಂದು ಬಹುತೇಕ ನಾಟಿ ವೈದ್ಯ ಪದ್ದತಿ ಅಥವಾ ಜನಪದ ವೈದ್ಯ ಪದ್ದತಿ ಕಣ್ಮರೆಯಾಗುತ್ತಿದ್ದರೂ ಪೂರ್ಣ ಮರೆತುಹೋಗಿಲ್ಲ. ಕಬ್ಬಳಿಯಲ್ಲೂ ಸಹ ಜನ–ದನಗಳ ಹಲವು ಕಾಯಿಲೆಗಳಿಗೆ, ಗ್ರಾಮಗಳಿಗೆ ಹಸಿರು ಔಷಧಿ ನೀಡುವ ನಾಟಿ ವೈದ್ಯರಿದ್ದಾರೆ.

" ನಾಡಂ ಮದ್ದಂ ತಿಂದು ಕುತ್ತಾ ಕೆಡದಿರಬಹುದೇ? " ಎಂದು ಮಹಾಕವಿ ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ ಹೇಳಿದ್ದನು. ಪ್ರತಿಯೊಂದು ಪ್ರಾಣಿ ಪಕ್ಷಿಗಳಿಗೂ ರೋಗಗಳು ತಪ್ಪಿದ್ದಲ್ಲ. ಅಂತಹ ರೋಗಗಳನ್ನು ನಾಟಿ ವೈದ್ಯ ಪದ್ದತಿಯಿಂದ ಗುಣಪಡಿಸಬಹುದು. ಈ ರೀತಿಯ ನಾಟಿ ವೈದ್ಯ ಪದ್ದತಿ ಕಬ್ಬಳಿ ಗ್ರಾಮದಲ್ಲಿ ಇರುವುದನ್ನು ಗಮನಿಸಿ ನೋಡಬಹುದಾಗಿದೆ.

ಕಬ್ಬಳಿ ಗ್ರಾಮದಲ್ಲಿ ಕಾಲುಮುರಿತ ಚಿಕಿತ್ಸೆಯಲ್ಲಿ ಪ್ರಖ್ಯಾತಿ ಹೊಂದಿದ ಜನಪದ ವೈದ್ಯ ಪದ್ದತಿ ಇದೆ, ಈಗಲೂ ಯಶಸ್ವಿಯಾಗಿ ಚಿಕಿತ್ಸಾ ಕಾರ್ಯ ಮುಂದುವರಿಸುತ್ತಿರುವ ನಾಟಿ ವೈದ್ಯರಿದ್ದಾರೆ. ಆಧುನಿಕ ವೈದ್ಯರು ನಿಭಾಯಿಸಲಾಗದಂತಹ ಸಂಕೀರ್ಣವಾದ ಸಮಸ್ಯೆಗಳನ್ನು ಯಶಸ್ವಿಯಾಗಿ ಗುಣಪಡಿಸಿರುವ ಪ್ರಸಂಗಗಳುಂಟು ಹಾಗೂ ವ್ಯಕ್ತಿ ನರಗಳ ದೌರ್ಬಲ್ಯದಿಂದ ನರಳುತ್ತಿದ್ದರೆ ಜನಪದ ಚಿಕಿತ್ಸೆಯಿಂದ ಗುಣಪಡಿಸುತ್ತಾರೆ.

ಇಲ್ಲಿನ ಜನರು ಕೇವಲ ಮನುಷ್ಯರಿಗೆ ಸಂಬಂಧಪಟ್ಟ ಕಾಯಿಲೆಗಳಿಗೆ ಮಾತ್ರವಲ್ಲದೇ ವ್ಯವಸಾಯಕ್ಕೆ ಪ್ರಧಾನವಾಗಿ ಬಳಸುವ ದನಕರುಗಳಿಗೂ ಔಷಧಿ ನೀಡುತ್ತಾರೆ. ಮೊಳವು ಬಿಟ್ಟಾಗ ದನಕರುಗಳ ಮೂಳೆ ಜರುಗಿದಾಗ ಬಿದಿರು, ದಬ್ಬೆ ಕಟ್ಟಿ ಗುಣಪಡಿಸುವುದು. ಹೊಟ್ಟೆ ಊದಿಕೊಂಡಾಗ ಹೀಗೆ ಇನ್ನೂ ಅನೇಕ ಸಂದರ್ಭಗಳಲ್ಲಿ ವಿಶೇಷ ಚಿಕಿತ್ಸೆಯನ್ನು ನೀಡುತ್ತಾರೆ. ಆಧುನಿಕ ವೈದ್ಯಪದ್ದತಿಯು ಇಂದು ಪರಿಪೂರ್ಣವಾಗಿ ಬೆಳೆದಿದ್ದರೂ ನಾಟಿ ವೈದ್ಯ ಪದ್ಧತಿಯು ಕೆಲವು ಸಂದರ್ಭದಲ್ಲಿ ತುಂಬಾ ಸಹಕಾರಿಯಾಗಿದೆ.

## ನ್ಯಾಯ ನಡಾವಳಿಗಳು

ಕಬ್ಬಳಿ ಗ್ರಾಮದಲ್ಲಿ ನ್ಯಾಯ ನೀತಿಗಳನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಲು ಪಂಚಾಯಿತಿಗಳನ್ನು ನಡೆಸುತ್ತಾರೆ. ಜನರು ಈಗಲೂ ನ್ಯಾಯ,ನೀತಿ, ಪಂಚಾಯ್ತಿಗಳ ತೀರ್ಪನ್ನು ಮೀರದೆ ಸಂಪ್ರದಾಯವಾಗಿ ಬದುಕುತ್ತಿದ್ದಾರೆ. ಆದರೆ ಕೆಲವರು ಈ ವ್ಯವಸ್ಥೆಯನ್ನು ಮೀರಿದಾಗ ನ್ಯಾಯಕ್ಕಾಗಿ ಕೋರ್ಟು ಮೆಟ್ಟಿಲು ಹತ್ತಬೇಕಾಗುತ್ತದೆ. ಹಿಂದೆ ತಪ್ಪು ಮಾಡಿದವರ ತಲೆಯನ್ನು ಬೋಳಿಸಿ ಅವನ ತಲೆಯ ಮೇಲೆ ಬೇವಿನ ಕೆಂಡ ತುಂಬಿದ ಮಡಿಕೆಯನ್ನು ಹೊರಿಸಿ ಊರಿನ ತುಂಬಾ ಮೆರವಣಿಗೆ ಮಾಡುತ್ತಿದ್ದರೆಂಬ ದಂತಕತೆಯಿದೆ. ಆದರೆ ಈ ರೀತಿಯ ನ್ಯಾಯ ಸಂಪ್ರದಾಯ ಈಗ ಸಂಪೂರ್ಣವಾಗಿ ಇಲ್ಲವಾಗಿದೆ.

## ಜನರು ಮತ್ತು ಜನಾಂಗ ಸಂಬಂಧ

ಕಬ್ಬಳಿ ಗ್ರಾಮದಲ್ಲಿ ಸಾವಿರಕ್ಕೂ ಹೆಚ್ಚು ಜನಸಂಖ್ಯೆ ಇರುವಂತೆ ಹಲವಾರು ಜಾತಿಯ ಜನರು ವಾಸಿಸುತ್ತಿದ್ದಾರೆ. ಅವರಲ್ಲಿ ಪ್ರಮುಖರೆಂದರೆ ಒಕ್ಕಲಿಗ ಜನಾಂಗ, ಬಡಗಿಗಳು, ಆಚಾರಿಗಳು, ಹರಿಜನ, ಮಡಿವಾಳರು, ಕುರುಬ ಜನಾಂಗಗಳು ಇವೆ.

ಈ ಊರಿನಲ್ಲಿ ಆಯಾ ಜನಾಂಗಕ್ಕೆ ಸಂಬಂಧಿಸಿದ ಜನರಿಗೆ ಪ್ರತ್ಯೇಕ ಬೀದಿಗಳಿದ್ದು, ಅವರು ಅಲ್ಲಲ್ಲೇ ವಾಸಿಸುವ ಪದ್ಧತಿಯನ್ನು ಈಗಲೂ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಅವರವರ ಕಸುಬುಗಳು ಕೂಡ ಬದಲಾಗಿಲ್ಲ. ಬಡಗಿಗಳು ಈಗಲೂ ಮರಗೆಲಸದಲ್ಲಿ ನಿರತರಾಗಿದ್ದಾರೆ.

ಹರಿಜನರು ದೇವರಿಗೆ ವಾದ್ಯಬಾರಿಸುವ ಉದ್ಯೋಗದಲ್ಲಿ ಈಗಲೂ ಇದ್ದಾರೆ. ಆದರೆ ಇಂದಿನ ಯುವಜನತೆ ಈ ವ್ಯವಸ್ಥೆಯನ್ನು ಮೀರಿ ತಮ್ಮ ಬದುಕಿಗೆ ಹೊಸ ದಾರಿಯನ್ನು ಹುಡುಕಿಕೊಂಡಿರುವುದನ್ನು ನಾವು ಗಮನಿಸಬಹುದು. ಒಕ್ಕಲಿಗ ಜನಾಂಗದವರು ಈ ವರ್ಗದ ಜನರಿಗೆ, ಅವರು ಮಾಡುವ ಕುಲವೃತ್ತಿಗೆ ದತ್ತಿಯಾಗಿ ಜಮೀನನ್ನು ಹಂಚಿದ್ದಾರೆ. ಎಲ್ಲರೂ ಯಾವುದೇ ರೀತಿಯ ಅನಾಹುತಕಾರಿ ಘಟನೆಗಳಲ್ಲಿ ತೊಡಗದೆ ಹಬ್ಬ ಆಚರಣೆಗಳಲ್ಲಿ ಒಟ್ಟೊಟ್ಟಿಗೆ ಸೇರಿ ಅವರವರ ಕಾರ್ಯ ನಿರ್ವಹಿಸುತ್ತಾರೆ. ಹರಿಜನರಿಗೆ ಈಗಲೂ ದೇವಸ್ಥಾನಗಳಿಗೆ ಪ್ರವೇಶ ನೀಡದಿರುವುದು ವಿಷಾದನೀಯ ವಿಚಾರವಾಗಿದೆ. ಇದನ್ನು ಗಮನಿಸಿದಾಗ ಮೇಲ್ನೋಟಕ್ಕೆ ಜನರು ಚೆನ್ನಾಗಿದ್ದರೂ ಮನಸ್ಸಿನೊಳಗೆ 'ಕಂದರಗಳು ಬಾಯ್ತೆರೆದುಕೊಂಡಿರುವುದು ಕಂಡುಬರುತ್ತದೆ.

ಈ ಮೇಲಿನ ಹಲವು ಜನಾಂಗಗಳಲ್ಲಿ ಪ್ರಾರಂಭದಲ್ಲಿ ಆರ್ಥಿಕವಾಗಿ ಸದೃಢವಾಗಿದ್ದವರು ಆಚಾರ್ಯ ಜನಾಂಗ, ಲೇವಾದೇವಿ ವ್ಯವಹಾರಗಳಲ್ಲೂ ಅವರೇ ಮುಂದಿದ್ದರೆಂದು ಕಬ್ಬಳಿಯ 80ರ ಹರೆಯದ ಲಿಂಗೇಗೌಡರು ವಾಸ್ತವವನ್ನು ಬಿಚ್ಚಿಡುತ್ತಾರೆ. ಅನಂತರ ಒಕ್ಕಲಿಗರು ಮತ್ತು ಕುರುಬ ಜನಾಂಗ ಸ್ವಲ್ಪಮಟ್ಟಿಗೆ ಆರ್ಥಿಕ ಪ್ರಗತಿ ಸಾಧಿಸಿದ್ದು ಕಂಡುಬಂದರೆ ಪ್ರಬಲವಾಗತೊಡಗಿದವರು ಒಕ್ಕಲಿಗರೆ.

ದಲಿತರು ಮತ್ತು ಬಡಗಿಗಳು, ಮಡಿವಾಳರು ಹಿಂದಿದ್ದ ಪರಿಯಲ್ಲೇ ಈಗಲೂ ಇದ್ದಾರೆ ಹಾಗೂ ಸರ್ಕಾರ ನೀಡುವನೆರವಿನ ವ್ಯವಸ್ಥೆಯಿಂದಲೂ ವಂಚಿತರಾಗಿ ಬದುಕುತ್ತಿದ್ದಾರೆ. ಇವರಿಗೆ ತಲುಪಬೇಕಾದ ಸೌಲಭ್ಯಗಳು ಮೂರನೆಯವರ ಪಾಲಾಗುತ್ತಿವೆ. ಈ ಜನಾಂಗಗಳಲ್ಲಿ ಈಗಲೂ ಮೂಢನಂಬಿಕೆ,ಸಂಪ್ರದಾಯಗಳು ಬಲವಾಗಿ ಬೇರುಬಿಟ್ಟು ಬೆಳೆದು ನಿಂತಿದೆ. ಕಾರಣ ಹಿರಿಯ ತಲೆಮಾರಿನ ಜನ ಅಕ್ಷರ ಜ್ಞಾನದಿಂದ ವಂಚಿತರಾಗಿರುವುದೆನ್ನಬಹುದು.

## ಮದುವೆ

ಕಬ್ಬಳಿ ಗ್ರಾಮದ ಜನರು ಮತ್ತು ಜನಾಂಗ ಸಂಬಧವನ್ನ ಪರಿಶೀಲಿಸುವಾಗ ಆ ಊರಿನಲ್ಲಿ ಕಂಡು ಬರುವ ಮದುವೆ ಸಂಪ್ರದಾಯವನ್ನ ಕುರಿತು ವಿವೇಚಿಸಬೇಕಾಗುತ್ತದೆ. ಮನುಷ್ಯನ ಬದುಕಿನ ಅವಿಭಾಜ್ಯ ಅಂಗವಾದ ಮದುವೆ ಆಯಾಯಾ ಗ್ರಾಮಗಳಲ್ಲಿ ವಿಶೇಷವನ್ನು ತಳೆದು ಸಂಸ್ಕೃತಿಯ ಭಾಗವಾಗಿ ಮೂಡಿ ಬರುತ್ತದೆ. ಇದರಿಂದಾಗಿ ಹಳ್ಳಿಗಳಲ್ಲಿ ನಡೆಯುವ ಪ್ರತಿ ಮದುವೆಗಳು ಜನ ಜನಾಂಗದ ರೂಢಿ ಆಚಾರಗಳ ಮೇಲೆ ನೆಲೆನಿಂತು ಸಾಗಿಬರುತ್ತದೆ. ಕಬ್ಬಳಿ ಜನ ಜನಾಂಗದ ರೂಢಿ ಆಚಾರಗಳ ಮೇಲೆ ನೆಲೆನಿಂತು ಸಾಗಿಬರುತ್ತದೆ. ಕಬ್ಬಳಿ ಗ್ರಾಮವನ್ನು ಅವಲೋಕಿಸಿದಾಗ ಮದುವೆ ಮಾಡುವ ಪದ್ಧತಿ ಮಾತ್ರ ತೀರ ಅಪರೂಪವೆನಿಸದಿದ್ದರೂ ಆ ಗ್ರಾಮದಲ್ಲಿರುವ ಹಲವಾರು ಜನಾಂಗಗಳಿಗೆ ಅನುಗುಣವಾಗಿ ಮದುವೆಗಳು ನಡೆಯುತ್ತವೆ. ಒಕ್ಕಲಿಗರು, ದಲಿತರು, ಆಚಾರರು, ಮಡಿವಾಳರು, ಬಡಿಗಿಗಳು, ಈ ಐದಾರು ಜಾತಿಯ ಜನರಲ್ಲೂ ಭಿನ್ನ ಭಿನ್ನ ಸ್ವರೂಪದ ಶಾಸ್ತ್ರ ಸಂಬಂಧಗಳ ಕಲ್ಪನೆ ಈಗಲೂ ಇದೆ.

ದಲಿತರಲ್ಲಿ ಎಡಗೈ ಬಲಗೈ ಜನಾಂಗಳಿದ್ದು, ಎಡಗೈನವರ ಮನೆಯಲ್ಲಿ ಬಲಗೈನವರು ಹೆಣ್ಣು ತರುವ ಸಂಪ್ರದಾಯ ಇವತ್ತಿಗೂ ಇಲ್ಲ. ಈ ಜನಾಂಗದಲ್ಲಿ ಮದುವೆಯ ಎರಡು ದಿನಗಳ ಕಾಲ ನಡೆಯುತ್ತದೆ. ಗಂಡಿನ ಮದುವೆಯಾದರೆ ನಾಲ್ಕು ಕಂಬದ ಚಪ್ಪರವನ್ನು ಮನೆಯ ಮುಂದೆ ಹಾಕಲಾಗುತ್ತದೆ. ಹೆಣ್ಣಿನ ಮದುವೆಯಾದರೆ ಎಂಟು ಅಥವಾ ಹನ್ನೆರಡು ಕಂಬದ ಚಪ್ಪರ ಹಾಕಲಾಗುತ್ತದೆ. ಎರಡನೇ ದಿನ ಇದರ ಕೆಳಗೆ ಮದುವೆ ನಡೆಯುತ್ತದೆ.

ಕಬ್ಬಳಿಯಲ್ಲಿ ಸಾಮಾನ್ಯವಾಗಿ ಕಂಡು ಬರುವ ಮದುವೆಯ ಪದ್ಧತಿಯೆಂದರೆ ಮೊದಲನೆಯ ದಿನ ರಾತ್ರಿ ಹೆಣ್ಣು ಮತ್ತು ಗಂಡಿಗೆ ಸ್ನಾನ ಮಾಡಿಸಿ ಊರಿನ ಹಿರಿಯ

ಮುತ್ತೈದೆಯರನ್ನು ಕರೆಸಿ ವಾದ್ಯವೃಂದದೊಡನೆ ಮದುಮಗ ಅಥವಾ ಮದುಮಗಳ ಮೈಗೆ ಅರಿಸಿನ ತಿಕ್ಕುವ ಕಾರ್ಯ ಮಾಡುತ್ತಾರೆ. ಈ ಸಂದರ್ಭದಲ್ಲಿ ಗಂಡಿನ ಮದುವೆಯಾದರೆ ಮದುಮಗನಿಗೆ ಕಂಕಣ ಕಟ್ಟುವ ಕ್ರಿಯೆ ನಡೆಯುತ್ತದೆ. ಹೆಣ್ಣಿನ ಮದುವೆಯಾದರೆ ಮದುಮಗಳಿಗೆ ಬಳೆ ತೊಡಿಸುವ ಕ್ರಿಯೆ ನಡೆಯುತ್ತದೆ. ಯಾಕೆಂದರೆ ಮದುಮಗನಿಗೆ " ಕಂಕಣ " ಬಲದ ಸಂಕೇತವೆಂದು, ಹಾಗೆಯೇ ಬಳೆಗಳು ಹೆಣ್ಣಿಗೆ ತಂದೆಯ ಮನೆಯ ಅಮೂಲ್ಯ ಒಡವೆಗಳು ಎಂದು ಇಲ್ಲಿಯ ಜನ ಹೇಳುತ್ತಾರೆ. ಮದುವೆಯ ಎರಡನೇ ದಿನ ಮದುಮಗನನ್ನು ಮದುಮಗಳ ಮನೆಗೆ ಕರೆತರಲಾಗುತ್ತದೆ. ಮದುಮಗಳ ಮನೆಯಲ್ಲಿ ಧಾರೆ ಮುಹೂರ್ತದ ಶಾಸ್ತ್ರಗಳು ನಡೆಯುತ್ತದೆ. ಅನಂತರ ಗಂಡಿನ ಮನೆಯವರು ಹೆಣ್ಣನ್ನು ತಮ್ಮ ಮನೆಗೆ ಕರೆದುಕೊಂಡು ಹೋಗುತ್ತಾರೆ.

## ರಸ್ತೆ ಮತ್ತು ಸಾರಿಗೆ

ಕಬ್ಬಳಿ ಗ್ರಾಮ ನಾಗರಿಕತೆಯಲ್ಲಿ ಸ್ವಲ್ಪ ಹಿಂದೆ ಬಿದ್ದಿರಲು ಪ್ರಮುಖ ಕಾರಣ ಯಾವುದೇ ಪಟ್ಟಣ ನಗರಗಳು ಸಮೀಪದಲ್ಲಿ ಇಲ್ಲದೇ ಇರುವುದು. ಕಬ್ಬಳಿ ಗ್ರಾಮಕ್ಕೆ ಚನ್ನರಾಯಪಟ್ಟಣ, ಹಿರೀಸಾವೆ, ದಿಡಗ, ತಿಪಟೂರು, ಹಾಸನ ಎಲ್ಲ ಕಡೆಯಿಂದಲೂ ಡಾಂಬರು ರಸ್ತೆಯಿರುವಂತೆ ಬಸ್ ವ್ಯವಸ್ಥೆಯೂ ಇದೆ. ಆದರೆ ಹೇಳಿಕೊಳ್ಳುವಷ್ಟು ಉತ್ತಮವಾಗಿಲ್ಲ. ಕಬ್ಬಳಿ " ಶ್ರೀಕ್ಷೇತ್ರ "ವಾದ ಮೇಲೆ ಬಸ್ಸು ನೋಡುವಂತಾದ ಇಲ್ಲಿನ ಜನರು ಮಾಜಿ ಸಚಿವರಾದ ಹೆಚ್.ಸಿ.ಶ್ರೀಕಂಠಯ್ಯ ಮತ್ತು ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರನ್ನು ನೆನಪಿಸಿಕೊಳ್ಳುತ್ತಾರೆ. ಯಾಕೆಂದರೆ ಸಾರಿಗೆ ವ್ಯವಸ್ಥೆ ಮಾಡಿದ ಪ್ರಮುಖ ಕಾರಣಕರ್ತರು ಇವರೆನ್ನುತ್ತಾರೆ. ಆದರೆ ಬಸ್ಸಿನ ವ್ಯವಸ್ಥೆ ಇನ್ನೂ ಉತ್ತಮವಾಗಿರಬೇಕು ಎಂದು ಇಲ್ಲಿನ ಜನರು ಆಶಿಸುತ್ತಾರೆ.

## ಸಂಪರ್ಕ ತಂತ್ರಜ್ಞಾನ

ಇಡೀ ಜಗತ್ತನ್ನೇ ಮರುಳುಗೊಳಿಸುವಂತಹ ತಂತ್ರಜ್ಞಾನ ಕಬ್ಬಳಿ ಗ್ರಾಮವನ್ನು ತನ್ನ ಮಾಯಾಬಾಹುಗಳಲ್ಲಿ ಬಂಧಿಸಿಕೊಂಡಿದೆ ಎಂದರೆ ತಪ್ಪಾಗಲಾರದು. ರೇಡಿಯೋವನ್ನೇ ಹೆಚ್ಚಾಗಿ ಬಳಸುವ ಈ ಊರಿನಲ್ಲಿ ಟಿ.ವಿ.ಗಳ ಸಂಖ್ಯೆಯೂ ಅಧಿಕವಾಗಿದೆ. ಟೆಲಿಫೋನ್,ಮೊಬೈಲ್ ಜಾಲಗಳು ಅವಶ್ಯಕತೆಗಿಂತ ಹೆಚ್ಚಾಗಿವೆ. ಅಂಚೆವ್ಯವಸ್ಥೆಯೂ ಉತ್ತಮವಾಗಿದ್ದು, ಮೊಬೈಲ್ ಬಳಕೆ ಹೆಚ್ಚಾದಂತೆ ಅಂಚೆಯ ಮೇಲೆ ಪ್ರಭಾವ ಉಂಟಾಗಿರುವುದನ್ನು ಅಲ್ಲಿಯ ಪೋಸ್ಟ್‌ಮಾಸ್ಟರ್ ವಿವರಿಸುತ್ತಾರೆ. ಯಾವುದೇ ರೀತಿಯ ಆರೋಗ್ಯಕೇಂದ್ರಗಳಿಲ್ಲ. ಜನರು ಕಾಯಿಲೆಯಿಂದ ನರಳಿದರೆ ಹೋಗಬೇಕಾಗಿರುವುದು 10–12 ಕಿ.ಮಿ.ದೂರವಿರುವ ನುಗ್ಗೇಹಳ್ಳಿ, ದಿಡಗಗಳಿಗೆ.

## ಕಬ್ಬಳಿ ಸುತ್ತ–ಮುತ್ತ

ಕಬ್ಬಳಿ ಗ್ರಾಮವು ವೈಜ್ಞಾನಿಕವಾಗಿ, ಆರ್ಥಿಕವಾಗಿ ಅಷ್ಟು ಬಲಿಷ್ಠವಲ್ಲ ಮತ್ತು ಸಂಪ್ರದಾಯಗಳಿಂದಲೂ ಹೊರತಾಗಿಲ್ಲ. ಜನರ ಆಸೆ, ಆಕಾಂಕ್ಷೆಗಳು, ಕನಸುಗಳು ಇಲ್ಲಿ ಇನ್ನೂ ಸಾಕಾರಗೊಳ್ಳುವ ಯಾವುದೇ ನಿರೀಕ್ಷೆಗಳು ಬೆಳೆದಿಲ್ಲ. ಆದರೆ ಕಬ್ಬಳಿಯನ್ನು ಸುತ್ತುವರೆದಿರುವ ಮೂಕಿಕೆರೆ, ಮಂಡಲೀಕನಹಳ್ಳಿ, ಗುಂಗುರುಮಳೆ, ಮೇಗಲಕೊಪ್ಪಲು, ದಾಸರಹಳ್ಳಿ, ದುಗ್ಗೇನಹಳ್ಳಿ, ಮಸಕನಹಳ್ಳಿ,ಉಂಗುರಗೆರೆ,ಬಿಳಿಕೆರೆ ಗ್ರಾಮಗಳೂ ಕೂಡ ಆಧುನಿಕವಾಗಿ ಇಂದಿಗೂ ತಂತ್ರಜ್ಞಾನದಲ್ಲಿ ಯಾವುದೇ ರೀತಿ ಬೆಳವಣಿಗೆಹೊಂದಿಲ್ಲ. ಈ ಮೇಲಿನ ಊರುಗಳಲ್ಲೂ ಈಗಲೂ ಕೃಷಿಯನ್ನೆ ಅವಲಂಬಿಸಿದ್ದು, ಅದು ಮಳೆ ಬಿದ್ದರೆ ಮಾತ್ರ ಸಾಧ್ಯವಾಗುತ್ತದೆ. ಗುಂಗುರಮಳೆ, ಮೇಗಲಕೊಪ್ಪಲು, ಮುಂತಾದ ಗ್ರಾಮದವರು ತೆಂಗನ್ನು ಹೆಚ್ಚಾಗಿ ಬೆಳೆದಿದ್ದು, ಕೊಬ್ಬರಿಯನ್ನು ಅಧಿಕವಾಗಿ ಮಾರುಕಟ್ಟೆಗೆ ಒದಗಿಸುತ್ತಾರೆ. ಈ ಗ್ರಾಮಗಳು ಆರ್ಥಿಕವಾಗಿಯೂ ಸ್ವಲ್ಪ ಮುಂದುವರೆದಿದೆ. ಅಲ್ಪ–ಸ್ವಲ್ಪ ಕೃಷಿಯಲ್ಲಿ ಆಧುನಿಕತೆಯನ್ನು ಬಳಕೆ ಮಾಡುತ್ತಿವೆ. ಕೊಳವೆಬಾವಿಗಳ ಮೂಲಕ ನೀರಿನ ವ್ಯವಸ್ಥೆ ಕಲ್ಪಿಸಿಕೊಂಡಿವೆ. ಆದ್ದರಿಂದ ತೆಂಗಿನ ಜೊತೆಗೆ ಅಡಿಕೆ ಇತರೆ ಉಪಬೆಳೆಗಳಾದ ಮೆಣಸಿನಕಾಯಿ,ಬಾಳೆ,ಬದನೆ, ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ.

ಹೀಗೆ ಕಬ್ಬಳಿ ಗ್ರಾಮವು ಯಾವುದೇ ಕೆರೆ, ಕಟ್ಟೆ, ನಾಲೆ ಹೊಂದದೆ ಇರುವುದರಿಂದ ಭತ್ತ ಬೆಳೆಯುವುದೇ ಅಪರೂಪ. ಹಲವು ನ್ಯೂನ್ಯತೆಗಳಿಂದಲೇ ಕೂಡಿರುವ ಊರು ಕಬ್ಬಳಿ. ಸರ್ಕಾರಗಳು ರಾಜಕೀಯ ನಾಯಕರು ಈ ಊರುಗಳತ್ತ ಒಂದು ನೋಟ ಹಾಯಿಸಬೇಕಾಗಿದೆ. ಆಗ ಮಾತ್ರ ವ್ಯವಸ್ಥೆ ಉತ್ತಮವಾಗಬಹುದೇನೊ ?

ಒಟ್ಟಾರೆ ಕಬ್ಬಳಿ ಗ್ರಾಮವು ಭೌಗೋಳಿಕವಾಗಿ ಹಲವು ದ್ವಂದ್ವಗಳನ್ನು ಹೊಂದಿದ್ದು, ಅವುಗಳನ್ನೆಲ್ಲಾ ಪರಿಹಾರ ಮಾಡಿಕೊಳ್ಳುವ ನಿಟ್ಟಿನಲ್ಲಿ ಯಶಸ್ವಿಯಾಗಲಿ ಎಂದು ನಾವು ಹಾರೈಸಬೇಕಿದೆ. ಏಕೆಂದರೆ ಹಲವು ಜನಾಂಗ, ಮಳೆಯ ವೈಪರಿತ್ಯ, ಭೂಮಿ, ಹವಾಗುಣ, ನೀರಾವರಿ, ಸಾರಿಗೆ ಸಂಪರ್ಕ, ಇವುಗಳೆಲ್ಲ ಹೊಂದಾಣಿಕೆಯಿಂದ ನಡೆಯಬೇಕು. ಅಲ್ಲದೆ ಆರೋಗ್ಯ ಕೇಂದ್ರದ ವ್ಯವಸ್ಥೆಯಾಗಬೇಕಾಗಿದೆ. ಮನುಷ್ಯರ ಮಾನಸಿಕ ಸಂಬಂಧಗಳು ಇನ್ನೂ ಗಟ್ಟಿಗೊಳ್ಳಬೇಕಿದೆ.

## ಐತಿಹಾಸಿಕ ಹಿನ್ನಲೆ

ಕಬ್ಬಳಿ ಗ್ರಾಮಕ್ಕೆ ಭೌಗೋಳಿಕ ಹಿನ್ನಲೆ ಇರುವಂತೆ ಐತಿಹಾಸಿಕ ಹಿನ್ನಲೆಯೂ ಇದೆ. ಕಬ್ಬಳಿ ಗ್ರಾಮದಲ್ಲಿರುವ ಬಸವೇಶ್ವರ, ಭೈರವೇಶ್ವರ, ಕಲ್ಲೇಶ್ವರ, ಮಲ್ಲೇಶ್ವರ ನಾಲ್ಕೂ ದೇವಸ್ಥಾನಗಳೂ ಚೋಳರ ಕಾಲದವೆಂದು ಈ ಊರಿನ ಹಿರಿಯರು ಹೇಳುತ್ತಾರೆ. ಅಲ್ಲದೆ ಶ್ರವಣಬೆಳಗೊಳಕ್ಕೂ ಈ ಊರಿಗೂ ಸಂಬಂಧ ಕಲ್ಪಿಸುತ್ತಾರೆ. ಆದರೆ ಅದು ವಾಸ್ತವಕ್ಕೆ ದೂರವಾದುದು. ಸತ್ಯಸಂಗತಿ ಈ ಹಿರಿಯರಿಗೂ ತಿಳಿದಿಲ್ಲ. ನಿಮಗೆ ಹೇಗೆ ಈ ವಿಷಯ ಗೊತ್ತು ಎಂದರೆ ಅವರು ತಮ್ಮ ಹಿರಿಯರ ಹೆಸರು ಹೇಳುತ್ತಾರೆ. ಆದರೆ ಅವರಾರು ಈಗ ಬದುಕಿಲ್ಲ. ಗಂಗದೊರೆ, ರಾಚಮಲ್ಲ ಕಟ್ಟಿಸಿದ ದೇವಸ್ಥಾನಗಳು ಎಂದು ಕೆಲವರು ಹೇಳುತ್ತಾರೆ. ಆದರೆ ಶ್ರವಣಬೆಳಗೊಳಕ್ಕೂ ಈ ಊರಿಗೂ ಯಾವುದೇ ಸಂಬಂಧವಿಲ್ಲದಿರುವುದು ಕಂಡು ಬರುತ್ತದೆ. ಇದಕ್ಕೆ ಕಾರಣವನ್ನು ನಾವು ಈ ರೀತಿ ನೀಡಬಹುದು. ಜೈನರಿಗೂ ಶಿವನಿಗೂ ಯಾವ ಸಂಬಂಧ. ಆದ್ದರಿಂದ ಜನರ ಹೇಳಿಕೆಯ ಸತ್ಯಾಸತ್ಯತೆ ತಿಳಿಯಲು ಇಲ್ಲಿನ

ದೇವಾಲಯಗಳ ಅಧ್ಯಯನಕ್ಕೆ ಸಾಕಷ್ಟು ಆಧಾರಗಳಿಲ್ಲ.

ಊರ ಮುಂದಿರುವ ಬಸವೇಶ್ವರ ಗುಡಿಯ ಪಕ್ಕದಲ್ಲಿರುವ ಶಾಸನ ಮತ್ತು ಮಲ್ಲೇಶ್ವರ, ಕಲ್ಲೇಶ್ವರ, ಭೈರವೇಶ್ವರ ದೇವಸ್ಥಾನಗಳ ಬಳಿ ಇರುವ ನಾಲ್ಕು ಶಾಸನಗಳನ್ನು ಗಮನಿಸಿದಾಗ ಇವು ಗಂಗರ ಕಾಲದವಾಗಿರಬಹುದೆಂದು ಊಹಿಸಬಹುದಾಗಿದೆ. ಗಂಗರು ಶಿವನ ಆರಾಧಕರಾಗಿದ್ದು, ಈ ದೇವಸ್ಥಾನಗಳು ಶೈವ ದೇವಸ್ಥಾನಗಳೇ ಆಗಿರುವುದರ ಜೊತೆಗೆ ಜನರು ಕೂಡ ಚೋಳರು ಅಥವಾ ಗಂಗರು ಅವುಗಳನ್ನು ಕಟ್ಟಿಸಿರಬಹುದು ಎಂದು ಹೇಳುವುದರಿಂದ ಬಹುಶಃ ಗಂಗರು ಈ ಪ್ರದೇಶದಲ್ಲಿ ಆಳಿರಬಹುದು ಎಂದು ಊಹಿಸಬಹುದಾಗಿದೆ. ಕಬ್ಬಳಿಯಲ್ಲಿ ಕಂಡುಬರುವ ಶಾಸನಗಳು ವಿರೂಪವಾಗಿದ್ದು, ಸ್ಪಷ್ಟಸಾಕ್ಷಿಗೆ ತೊಡಕಾಗಿವೆ. ಹಳಗನ್ನಡ, ಸಂಸ್ಕೃತ ಪದಗಳಿಂದ ತುಂಬಿರುವ ಈ ಶಾಸನಗಳು ಯಾರ ಕಾಲದವರು ಎಂದು ನಿಚ್ಚಳವಾಗಿ ಗುರುತಿಸಲು ಸಾಧ್ಯವಿಲ್ಲ. ಶಾಸನಗಳ ಜೊತೆಯಲ್ಲೇ ಕಬ್ಬಳಿಯಲ್ಲಿ ಕಂಡುಬರುವ ಹಳೆಯ ಕಾಲದ ಕಲ್ಯಾಣಿಗಳು ಕಬ್ಬಳಿಯ ಗತಕಾಲದ ವೈಭವಕ್ಕೆ ಸಾಕ್ಷಿಯಾಗಿವೆ. ಆದರೆ ಇಂದು ಇವು ಬಹುತೇಕ ಪಾಳುಬಿದ್ದಿದ್ದು ಇವುಗಳ ಪುನರುಜ್ಜೀವನದ ಕಡೆ ಸರ್ಕಾರ ಕಣ್ಣು ಹಾಯಿಸಬೇಕಿದೆ. ಇಲ್ಲಿರುವ ಶಾಸನಗಳ ಬಗ್ಗೆ ಮೈಸೂರು ಮತ್ತು ಶ್ರವಣಬೆಳಗೊಳದ ಪ್ರಾಚ್ಯ ವಸ್ತು ಸಂಗ್ರಹಾಲಯದ ಶಾಸನ ಲಿಪಿ ತಜ್ಞರು ಬಂದು ಶಾಸನಗಳ ಬಗ್ಗೆ ಮಾಹಿತಿ ಸಂಗ್ರಹಿಸಲು ಹೋಗಿದ್ದಾರೆಯಾದರೂ ಯಾವುದೇ ಫಲಿತಾಂಶ ನೀಡಲು ಮುಂದಾಗಿಲ್ಲ. ಕಾರಣ ಶಾಸನಗಳು ಒದಗಿಸುವ ಅಸ್ಪಷ್ಟ ದಾಖಲೆಗಳು.

ಅಲ್ಲದೆ ಬಸವೇಶ್ವರ ದೇವಾಲಯದ ಬಲಬದಿಯಲ್ಲಿರುವ ಕಲ್ಲಿನ ಎರಡು ಪಾದುಕೆಗಳು ಯಾರವು ಎಂಬುದು ತಿಳಿದಿಲ್ಲ. ಶ್ರವಣಬೆಳಗೊಳದ ಭದ್ರಬಾಹು ಗುಹೆಯಲ್ಲಿರುವ ಪಾದುಕೆಗಳನ್ನು ಹೋಲುತ್ತವೆಯಾದರೂ ಜೈನಮುನಿಗಳ ಪಾದುಕೆಗಳೆಂದು ನಂಬಲಾಗುವುದಿಲ್ಲ. ಯಾಕೆಂದರೆ ಈ ಊರಿಗೆ ಜೈನರು ಬಂದುದಕ್ಕೆ ಹೋದುದಕ್ಕೆ ಅದರ ಬಗೆಗೆ ಯಾವುದೇ

ಮಾಹಿತಿಯಿಲ್ಲ. ಅಲ್ಲದೆ ಜೈನ ತೀರ್ಥಂಕರರಿಗೂ ಬಸವೇಶ್ವರರ ಗುಡಿಗೂ ಎತ್ತಣೆತ್ತಣ ಸಂಬಂಧ ?

ಕಬ್ಬಳಿ ಗ್ರಾಮದಲ್ಲಿರುವ ದೇವಸ್ಥಾನಗಳನ್ನು ಒಡೆದು ಪುನರ್ ನಿರ್ಮಾಣ ಮಾಡಿರುವುದರಿಂದ ಯಾವುದೇ ಪುರಾತನ ಮಾಹಿತಿ ದೊರೆಯದಂತೆ ನಾಶವಾಗಿದೆ. ಅಲ್ಲದೆ ಸಾಕ್ಷಿಗಳು ಕೂಡ ಮಣ್ಣಿನಲ್ಲಿ ಮುಚ್ಚಿಹೋಗಿವೆ. ಸಧ್ಯದಲ್ಲಿ ಒಂದು ಶಾಸನದಿಂದ ಮಾತ್ರ ಕಬ್ಬಳಿಗೆ ಗಂಗರು ಬಂದಿದ್ದರು ಎಂಬ ಕುರುಹು ಮಾತ್ರ ದೊರೆಯುತ್ತದೆ. ಆದರೆ ಇದು ಕೂಡ ಅನುಮಾನಸ್ಪದವಾಗಿದೆ. ಇನ್ನೂ ಕೆಲವರು ಕದಂಬರು ಕಬ್ಬಳಿಗೆ ಬಂದು ಹೋಗಿದ್ದಾರೆ ಎಂದು ತಿಳಿಸುತ್ತಾರೆ. ಆದರೆ ಊರಿನ ಹಿರಿಯರನ್ನು ಕೇಳಿದಾಗ "ಇಲ್ಲಿ ಚೋಳರ ದೇವಸ್ಥಾನಗಳಿದ್ದೂ, ನಮ್ಮ ಅಪ್ಪಂದಿರ ಕಾಲದಲ್ಲಿ ಒಡೆದು ಹೊಸದಾಗಿ ಕಟ್ಟಿದರು" ಎನ್ನುತ್ತಾರೆ. ಕಲ್ಲಿನ ಚಕ್ರದ ರಥ ಈ ಊರಿನಲ್ಲಿ ಕಂಡು ಬರುವ ಇನ್ನೊಂದು ವಿಶೇಷ. ಈ ರಥದ ಚಕ್ರಗಳನ್ನು ಶ್ರವಣಬೆಳಗೊಳದ ಬಂಡೆಯಿಂದ ತಂದು ಮಾಡಿಸಿದರಂತೆ ಎಂಬ ಮಾತುಗಳನ್ನು ಇಲ್ಲಿನ ಜನ ಹೇಳುವುದನ್ನು ಮರೆಯುವುದಿಲ್ಲ. ಮೂಲರಥ ನಾಶವಾಗಿದ್ದರೂ ಹೊಸ ರಥವನ್ನು ಮರದಿಂದ ಕಟ್ಟಿ ಅದಕ್ಕೆ ಹಳೆಯ ರಥದ ನಾಲ್ಕು ಕಲ್ಲಿನ ಚಕ್ರಗಳನ್ನು ಬಳಸಿದ್ದಾರೆ. ಈಗಲೂ ಈ ತೇರಿನ ಬಳಕೆಯಿದ್ದು ಉಳಿದ ಎರಡು ಚಕ್ರಗಳು ಅನಾಥವಾಗಿ ಬಿದ್ದಿವೆ. ರಥದ ಕಲ್ಲಿನ ಚಕ್ರಗಳು ಕಬ್ಬಳಿಯಲ್ಲಿ ಅರಳಿರಬಹುದಾದ ಕಲೆಗೆ ಸಾಕ್ಷಿಯಾಗಿ ನಿಂತಿವೆ.

ಒಟ್ಟಾರೆ ಕಬ್ಬಳಿಯಲ್ಲಿರುವ ದೇವಾಲಯಗಳು, ಕಲ್ಯಾಣಿಗಳು, ಶಾಸನಗಳು, ಕಲ್ಲಿನ ಚಕ್ರದ ರಥ ಪಾದುಕೆಗಳು, ಇತ್ಯಾದಿಗಳು ಕಬ್ಬಳಿ ಗ್ರಾಮ ಹೊಂದಿರಬಹುದಾದ ಐತಿಹಾಸಿಕ ಹಿನ್ನಲೆಗೆ ಸಾಕ್ಷಿಯಾಗಿವೆ. ಆದರೆ ಇವುಗಳ ಸಮರ್ಪಕ ಅಧ್ಯಯನ ನಡೆಯದೆ ಕಬ್ಬಳಿಯ ಐತಿಹಾಸಿಕ ಹಿನ್ನಲೆಯನ್ನು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ.

ಅಧ್ಯಾಯ-3

# ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಮತ್ತು ಧಾರ್ಮಿಕ ಹಿನ್ನಲೆ

## ಸಾಮಾಜಿಕ ಪರಿಸ್ಥಿತಿ

ಒಂದು ರಾಷ್ಟ್ರದ ಸಾಮಾಜಿಕ ಮೌಲ್ಯ ಉತ್ತಮವಾಗಿದ್ದರೆ ಆ ರಾಷ್ಟ್ರದ ಘನತೆ ಹೆಚ್ಚುತ್ತದೆ. ಈ ಘನತೆಗೆ ಪ್ರಮುಖ ಸಾಧನ ಹಳ್ಳಿಯ ಸಾಮಾಜಿಕತೆ. ಕಬ್ಬಳಿಯು ಸಾಮಾಜಿಕವಾಗಿ ಹಲವು ಜಾತಿಗಳನ್ನು ಹೊಂದಿದೆ. ಇಲ್ಲಿ ಮೇಲು ಕೀಳು ಎಂಬ ಭಾವನೆಗಳು ಸಂಪೂರ್ಣವಾಗಿ ನಿರ್ಮೂಲನೆಗೊಂಡಿಲ್ಲ. ಕೆಲವೊಮ್ಮೆ ಅನೇಕ ಸಾಮಾಜಿಕ ಕಾರಣಗಳಿಗಾಗಿಯೇ ಗಲಭೆಗಳಾಗುವುದುಂಟು. ಆದರೆ ಎಂದಿಗೂ ಅದು ಅತಿರೇಕಕ್ಕೆ ಹೋಗದಂತೆ ಒಂದು ಸಮತೋಲನವನ್ನು ಕಾಪಾಡಿಕೊಂಡು ಬರಲಾಗುತ್ತಿದೆ.

ಕಬ್ಬಳಿಯ ಜನರನ್ನೆ ಮಾತನಾಡಿಸಿದಾಗ ಹರಿಜನರನ್ನು ಮನೆಗಳಿಗೆ, ದೇವಸ್ಥಾನಗಳಿಗೆ ಬಹಿಷ್ಕರಿಸಿರುವುದು ತಿಳಿದುಬಂತು. ಇದು ಕೇವಲ ಈ ಊರಿನ ಸಮಸ್ಯೆಯಲ್ಲ. ಇಡೀ ರಾಜ್ಯದ, ದೇಶದ ಸಮಸ್ಯೆ. ಇಂದು ಆಧುನಿಕತೆಯ ಬಿಸಿಲುಕುದುರೆ ಬೆನ್ನೇರಿ ಹೊರಟಿರುವ ಮಾನವ ತನ್ನ ಮನಸ್ಸಿನ ತಾರತಮ್ಯದ ವಿಷವೃಕ್ಷವನ್ನು ಕಡಿಯುವ ಪ್ರಯತ್ನವನ್ನು ಮಾಡಿಯೇ ಇಲ್ಲ.

ದಲಿತರಿಗೆ, ಮಡಿವಾಳರಿಗೆ, ಕುರುಬರಿಗೆ ಪ್ರತ್ಯೇಕ ಬೀದಿಗಳನ್ನು ಗುರುತಿಸಿಕೊಟ್ಟಿರುವ ಮೇಲ್ವರ್ಗದ ಜನ ಅವರೊಟ್ಟಿಗೆ ಹೊಂದಾಣಿಕೆಯ ನಾಟಕವಾಡುತ್ತಿದ್ದಾರೆ ಎನಿಸುತ್ತದೆ.

ಮೇಲಿನ ಗೊಂದಲಗಳು ಏನೇ ಇದ್ದರೂ ಆಯಾಯ ಜನಾಂಗದ ಸಂಸ್ಕೃತಿ ಮತ್ತು ಆಚರಣೆಗಳಿಗೆ ಯಾವುದೇ ಅಡ್ಡಿ ಅಡಚಣೆ ಇಲ್ಲದೆ ಅವರು ಸ್ವತಂತ್ರವಾಗಿ ತಮ್ಮ ಜೀವಂತ ಸಂಸ್ಕೃತಿಯನ್ನು ನಡೆಸಿಕೊಂಡು ಬರುವುದು ಸಾಧ್ಯವಾಗಿದೆ.

**ಆರ್ಥಿಕ ಪರಿಸ್ಥಿತಿ**

ಒಂದು ರಾಷ್ಟ್ರಕ್ಕೆ ಸಾಮಾಜಿಕ ಅಂಶ ಮುಖ್ಯವಾದಂತೆ ಆ ರಾಷ್ಟ್ರದ ಆರ್ಥಿಕ ಅಭಿವೃದ್ಧಿಯು ಮುಖ್ಯ. ಆರ್ಥಿಕತೆ ಇಲ್ಲದಿದ್ದಲ್ಲಿ ಯಾವ ರಾಷ್ಟ್ರವಾಗಲಿ, ರಾಜ್ಯವಾಗಲಿ, ಗ್ರಾಮವಾಗಲಿ ಬೆಳವಣಿಗೆ ಹೊಂದಲು ಸಾಧ್ಯವಿಲ್ಲ. ಯಾವುದೇ ಅಭಿವೃದ್ಧಿಯಲ್ಲಿ ಆರ್ಥಿಕತೆ ಅಂದರೆ ಹಣಕಾಸು ಪ್ರಮುಖ ಪಾತ್ರ ವಹಿಸುತ್ತದೆ. ಆರ್ಥಿಕತೆಯ ಮೇಲೆಯೇ ಒಂದು ಗ್ರಾಮದ, ರಾಜ್ಯದ ಏಳುಬೀಳುಗಳು ಗಂಭೀರವಾಗಿ ಪರಿಗಣನೆಗೆ ಬರುತ್ತವೆ.

ಆರ್ಥಿಕ ಸ್ವಾತಂತ್ರ್ಯವಿಲ್ಲದೆ ಯಾವುದೇ ಗ್ರಾಮ ಆಧುನಿಕತೆಯೊಡನೆ ಹಾಗೂ ಕಾಲರಾಯನ ಓಟದೊಡನೆ ಸ್ಪಂದಿಸಲಾರದು. ಆಗ ಅಲ್ಲಿನ ಜನ ತೊಂದರೆಗೆ ಒಳಗಾಗುವುದಲ್ಲದೆ ರಾಜ್ಯದ ಅಭಿವೃದ್ಧಿಗೆ ಒಂದು ಕಪ್ಪುಚುಕ್ಕೆಯಾಗಿ ನಿಲ್ಲುತ್ತದೆ. ಇಂತಹ ಗ್ರಾಮಗಳನ್ನು ಮೇಲೆತ್ತಲು ಸರ್ಕಾರ ಹಣ ವ್ಯಯ ಮಾಡಬೇಕು. ಜನರಿಗೆ ವ್ಯವಸಾಯ, ಗುಡಿಕೈಗಾರಿಕೆ, ಗೃಹಕೈಗಾರಿಕೆಗೆ ಸಾಲ ನೀಡಬೇಕಾಗುತ್ತದೆ. ಹೀಗಾದಾಗ ಜೀವನ ಮಟ್ಟ ಸುಧಾರಿಸಲ್ಪಡುತ್ತದೆ. ಆರ್ಥಿಕವಾಗಿಯೂ ಸುಧಾರಣೆಗೊಳ್ಳುತ್ತದೆ.

ಕಬ್ಬಳಿ ಗ್ರಾಮವು ಆರ್ಥಿಕವಾಗಿ ಬಲಿಷ್ಟವಾದ ಊರೇನಲ್ಲ. ಯಾಕೆಂದರೆ ಕೃಷಿಯನ್ನೇ ಅವಲಂಬಿಸಿರುವ ಈ ಊರಿನ ಬಹುತೇಕ ಜನರು ಕೃಷಿಭೂಮಿಯಿಂದಲೇ ಹಣ ಗಳಿಸಬೇಕಾಗಿದೆ. ಅದು ತೆಂಗು ಬೆಳೆಯಿಂದ ಮಾತ್ರ. ಈ ಊರಿನ ಪ್ರಮುಖ ಆರ್ಥಿಕ ಬೆಳೆಯೆಂದರೆ ಅದು ತೆಂಗು ಮಾತ್ರ. ಬಹುತೇಕ ಮಳೆಯಾಶ್ರಿತ ಬೆಳೆಗಳನ್ನೆ ಬೆಳೆಯುವ ಇಲ್ಲಿನ ಜನರು ಹಣಗಳಿಕೆಯಲ್ಲೇನು ಅಭಿವೃದ್ಧಿಹೊಂದಿದಂತೆ ಕಂಡುಬರುವುದಿಲ್ಲ.

ಸಾವಿರದಿಂದ ಎರಡು ಸಾವಿರ ತೆಂಗಿನ ಮರ ಹೊಂದಿರುವ ಕುಟುಂಬಗಳು ಕಬ್ಬಳಿಯಲ್ಲಿದ್ದು ಅಂತವರ ಸಂಖ್ಯೆ ಕೇವಲ ನಾಲ್ಕರಿಂದ ಐದು. ಹಾಗಾಗಿ ಅವರ ಆರ್ಥಿಕತೆ ಅಲ್ಪ ಸ್ವಲ್ಪ ಸುಧಾರಿಸಿದೆ. ಮಿಕ್ಕ ಕೆಲವರು ಕಂಟ್ರಾಕ್ಟನ್ನು ಅವಲಂಬಿಸಿ ಆರ್ಥಿಕವಾಗಿ ಬಲಾಢ್ಯರಾಗುತ್ತಿದ್ದಾರೆ. ಇನ್ನೂ ಕೆಲವರು ರಾಗಿ,ಜೋಳ ಬೆಳೆದು ಹೊಟ್ಟೆಬಟ್ಟೆಗೆ ಹೊಂದಿಸಿಕೊಂಡು ಬದುಕುತ್ತಿದ್ದಾರೆ. ಯಾವುದೇ ಕೃಷಿ ಭೂಮಿಯನ್ನು ಹೊಂದಿರದ ಜನ ಕೂಲಿ ಮಾಡಿ ಹೊಟ್ಟೆಹೊರೆದುಕೊಳ್ಳುತ್ತಿದ್ದಾರೆ. ಒಂದು ವೇಳೆ ಧೀರ್ಘಕಾಲ ಕೂಲಿ ಸಿಗದಿದ್ದರೆ ಇವರಿಗೆ ಉಪವಾಸವೇ ಗತಿ.

ಪ್ರಾರಂಭದಲ್ಲಿ ಆಚಾರರು ಆರ್ಥಿಕವಾಗಿ ಬಲಿಷ್ಠರಾಗಿದ್ದು, ಊರಿನಲ್ಲಿ ಹಣಕಾಸಿನ ಲೇವಾದೇವಿ ನಡೆಸುವವರಾಗಿದ್ದು ಕ್ರಮೇಣ ಅವರ ಶೋಷಣೆಗೆ ಒಳಗಾದ ಜನ ಅವರನ್ನು ಬಹಿಷ್ಕರಿಸಿದರು. ಕ್ರಮೇಣ ಒಕ್ಕಲಿಗ ಜನಾಂಗಗಳು ಈಗ ಆರ್ಥಿಕವಾಗಿ ಸದೃಢವಾಗುತ್ತಿವೆ. ಆದರೆ ಕಬ್ಬಳಿಯಲ್ಲಿ "ಗ್ರಾಮೀಣ ಬ್ಯಾಂಕ್" ಮತ್ತು ಅಂಚೆಕಛೇರಿಗಳು ತೆರೆದ ಮೇಲೆ ಈ ಊರಿನ ಜನರು ಗಳಿಸಿದ್ದನ್ನು ಉಳಿಸುವ ಪ್ರಯತ್ನ ಮಾಡುತ್ತಿದ್ದಾರೆ. ಹಣಕಾಸಿನ ವ್ಯವಹಾರದಲ್ಲಿ ಭಾಗಿಗಳಾಗುತ್ತಿದ್ದಾರೆ. ಈ ಊರಿನಲ್ಲಿರುವ ಸುಮಾರು ಶೇ. 70ರಷ್ಟು ಬಡವರು ಬ್ಯಾಂಕಿನಲ್ಲಿ ಮೂರು ಲಕ್ಷಕ್ಕೂ ಅಧಿಕ ಹಣ ಉಳಿತಾಯ ಮಾಡಿರುವುದಲ್ಲದೆ ಸಾಲ ಪಡೆದು ಸ್ವಉದ್ಯೋಗದಲ್ಲಿ ತೊಡಗಿದ್ದಾರೆ. ಹೈನುಗಾರಿಕೆ ಮತ್ತು ಕೊಳವೆಬಾವಿಗಳನ್ನು ತೋಡಿಸುವುದಕ್ಕೆ ಈ ಬ್ಯಾಂಕ್ ಸಾಲ ನೀಡಿದೆ. ಹೆಚ್ಚಿನ ಸಾಲ ಬೇಕೆಂದರೆ ತಾಲ್ಲೂಕು ಬ್ಯಾಂಕಿಗೆ ಶಿಫಾರಸ್ಸು ಮಾಡುತ್ತದೆ.

ಅಂಚೆ ಕಛೇರಿಯಲ್ಲೂ ಸಣ್ಣರೈತರು, ಕೂಲಿಕಾರ್ಮಿಕರು ಹಣ ಉಳಿತಾಯ ಮಾಡುವ ಪ್ರವೃತ್ತಿ ಹೊಂದಿದ್ದಾರೆ. ತೆಂಗನ್ನು ಬೆಳೆಯುವ ಕೆಲವು ಮಂದಿ ಕೊಬ್ಬರಿಯನ್ನು ಮಾರಾಟ ಮಾಡಲು ತಿಪಟೂರಿಗೆ ಹೋಗಬೇಕಾಗುತ್ತದೆ. ಇಲ್ಲಿನ ವ್ಯಾಪಾರಿಗಳಿಂದಲೂ ಹಣ ಸಾಲ ಪಡೆಯುವ ವ್ಯವಸ್ಥೆ ಈಗಲೂ ಇಲ್ಲಿ ಕಂಡು ಬರುತ್ತದೆ. ಇನ್ನೂ ಕೆಲವರು ಕಬ್ಬಳಿಯ ಸಂತೆಗಳಲ್ಲಿ ವ್ಯಾಪಾರ ಮಾಡುವ ರೂಢಿ ಹೊಂದಿದ್ದು, ಆ ಮೂಲಕ ಹಣ ಗಳಿಸುತ್ತಾರೆ.

ಮತ್ತೆ ಕೆಲವರು ಚಿಕ್ಕ ಚಿಕ್ಕ ಅಂಗಡಿಗಳನ್ನು ತೆರೆದುಕೊಂಡು ತಮ್ಮ ಆರ್ಥಿಕ ದುಸ್ಥಿತಿಯನ್ನು ದಾಹವನ್ನು ನೀಗಿಕೊಳ್ಳುವ ನಿಟ್ಟಿನಲ್ಲಿ ಪ್ರಯತ್ನಿಸುತ್ತಿದ್ದಾರೆ. ಹೀಗೆ ಕಬ್ಬಳಿ ಜನ ಕುಲ ಕಸುಬಿನ ಜೊತೆಗೆ ವ್ಯಾಪಾರ, ಲೇವಾದೇವಿ, ಕಂಟ್ರ್ಯಾಕ್ಟ್, ಇತ್ಯಾದಿ ಸಣ್ಣ ಪುಟ್ಟ ಮಾರ್ಗಗಳಲ್ಲಿ ಆರ್ಥಿಕ ಬೆಳವಣಿಗೆ ಕಾಣುತ್ತಿದ್ದಾರೆ.

ಪ್ರಮುಖವಾಗಿ ಈಗಲೂ ಆರ್ಥಿಕವಾಗಿ ಹಿಂದೆ ಉಳಿದವರು ಕಬ್ಬಳಿಯ ದಲಿತ ಜನಾಂಗ, ಬಡಗಿಗಳು,ಅಗಸರು, ಸರ್ಕಾರದ ಯೋಜನೆಗಳು ಇವರನ್ನು ಸಮಪರ್ಕವಾಗಿ ತಲುಪಿದಂತಿಲ್ಲ. ಇವರ ಆರ್ಥಿಕ ಪ್ರಗತಿಯಾಗದೆ ಕಬ್ಬಳಿಯಲ್ಲಿ ಆರ್ಥಿಕ ಅಭಿವೃದ್ಧಿ ಸಾಧ್ಯವಿಲ್ಲವೆಂದು ಹೇಳಬಹುದು.

**ರಾಜಕೀಯ ಅಂಶ**

ನಮ್ಮ ರಾಜ್ಯದಲ್ಲಿ ರಾಜಕೀಯ ಬಿಸಿ ತಟ್ಟದ ಯಾವುದೇ ನಗರವಾಗಲಿ, ಗ್ರಾಮವಾಗಲಿ ನಮಗೆ ಉದಾಹರಣೆಗೂ ಸಿಗುವುದಿಲ್ಲ. ಯಾಕೆಂದರೆ ರಾಜಕೀಯವೆಂಬ ಅಸ್ತ್ರವೇ ಎಲ್ಲಾ ಕ್ಷೇತ್ರಗಳಲ್ಲೂ ತನ್ನ ಪ್ರಬಲ ದಾಳಿಯನ್ನು ಮುಂದುವರೆಸಿಕೊಂಡು ಬಂದಿದೆ. ನೆಹರು, ಗಾಂಧಿ, ಅಂಬೇಡ್ಕರ್, ಈ ಮಹಾ ಚೇತನಗಳು ಗ್ರಾಮಗಳಿಗೂ ರಾಜಕೀಯದ ಹಕ್ಕು ನೀಡಬೇಕೆಂದು ಕನಸು ಕಂಡಿದ್ದು ನಿಜ. ಆ ರಾಜಕೀಯ ಹಕ್ಕು "ಗ್ರಾಮಪಂಚಾಯ್ತಿ"ಯ ರೂಪದಲ್ಲಿ ಹಳ್ಳಿಗಳಿಗೆ ದಾಳಿ ಇಟ್ಟಾಗ ಹಳ್ಳಿಯ ಜನರ ಮನಸ್ಥಿತಿ ಬದಲಾವಣೆಗೆ ಒಳಗಾದ್ದನ್ನು ಕಾಣಬಹುದು.

ಗ್ರಾಮ ಪಂಚಾಯ್ತಿಯ ಮೂಲ ಉದ್ದೇಶ ಗ್ರಾಮಗಳಿಗೆ ತಲುಪುತ್ತಿರುವ ಯೋಜನೆಗಳನ್ನು ಸಕಾಲಕ್ಕೆ ಸರಿಯಾಗಿ ತಲುಪಿಸುವ ಮತ್ತು ಎಲ್ಲಾ ಜನಾಂಗದ ವ್ಯಕ್ತಿಗಳಿಗೆ ರಾಜಕೀಯದಲ್ಲಿ

ಸಮಾನ ಅವಕಾಶ ಕಲ್ಪಿಸುವ ಪ್ರಯತ್ನವಷ್ಟೆಯಾಗಿತ್ತು. ಇಂದು ಕಬ್ಬಳಿಯಲ್ಲಿ "ಕಬ್ಬಳಿ ಗ್ರಾಮ ಪಂಚಾಯಿತಿ" ವ್ಯವಸ್ಥೆಯಿದೆ. ಗ್ರಾಮ ಪಂಚಾಯ್ತಿಗೆ ಚುನಾವಣೆ ಮೂಲಕ ಜನರು ಪ್ರತಿನಿಧಿಗಳನ್ನು ಆಯ್ಕೆ ಮಾಡುತ್ತಾರೆ. ಸರ್ಕಾರದ ಯೋಜನೆಗಳನ್ನು ಕಾರ್ಯರೂಪಕ್ಕಿಳಿಸುವುದು ಇವರ ಕೆಲಸ. ಆದರೆ ಸರ್ಕಾರದ ಯೋಜನೆಗಳು ದಲಿತರಿಗೆ, ಬಡವರಿಗೆ ಸರಿಯಾಗಿ ದೊರೆತಿಲ್ಲವೇನೋ ಎನಿಸುತ್ತದೆ. ಅಲ್ಲದೆ ಮುನ್ನೂರು,ನಾನೂರು ಮನೆಯಿರುವ ಈ ಊರಿನಲ್ಲಿ ನಾಲ್ಕು, ಐದು ಪಕ್ಷಗಳು ತಲೆಯತ್ತಿವೆ. ಅದರಲ್ಲಿ ಪ್ರಮುಖವಾಗಿ "ಕಾಂಗ್ರೆಸ್ ಮತ್ತು ಜಾತ್ಯಾತೀತ ಜನತಾದಳ". ಈ ಪಕ್ಷಗಳು ತಮ್ಮ ಬಲಾಬಲ ಕಾಯ್ದುಕೊಂಡು ಬಂದಿವೆ. ಊರಿನ ಅಧಿಕಾರದ ಚುಕ್ಕಾಣಿ ಹಿಡಿಯುವಲ್ಲಿ ಎರಡೂ ಪಕ್ಷಗಳ ಪ್ರತಿನಿಧಿಗಳು ಪ್ರಮುಖ ಪಾತ್ರ ವಹಿಸುತ್ತಾರೆ. ಈಚೆಗೆ ಬಿ.ಜೆ.ಪಿ.ಯೂ ಕೂಡ ತನ್ನ ಛಾಪನ್ನು ಮೂಡಿಸುತ್ತಿದ್ದು ಉಳಿದ ಪಕ್ಷಗಳು ನಗಣ್ಯವಾಗಿವೆ.

ರಾಜಕೀಯ ಪಕ್ಷಕ್ಕೆ ಹಲವು ಜನ ಕಾರ್ಯಕರ್ತರಿದ್ದಾರೆ. ಕಬ್ಬಳಿಯ ಕೆಲವು ಜನನಾಯಕರು ಕುಳಿತಲ್ಲಿಂದಲೇ ವಿಧಾನಸೌಧದೊಂದಿಗೆ ವ್ಯವಹರಿಸುವ ಕಲೆ ಕರಗತ ಮಾಡಿಕೊಂಡಿದ್ದಾರೆ. ಇಷ್ಟಾದರೂ ಈ ಊರಿಗೆ ಸರ್ಕಾರ ನೀಡಿದ ಆಶ್ರಯಯೋಜನೆ ಮನೆಗಳು,ಚರಂಡಿ, ನೀರು ವ್ಯವಸ್ಥೆ, ಇವೆಲ್ಲ ರಾಜಕೀಯ ನಾಯಕರಿಗೆ ದಕ್ಕಿವೆ. ಇನ್ನೂ ಕೆಲವರು ಕಲ್ಲುಕುಟೀರ ಮನೆಗಳಲ್ಲಿ ವಾಸಿಸುತ್ತಿರುವುದೇ ಇದಕ್ಕೆ ಸಾಕ್ಷಿ. ಒಟ್ಟಾರೆ ರಾಜಕಾರಣವೆಂಬುದು ಕಬ್ಬಳಿ ಗ್ರಾಮದಲ್ಲಿ ಬಲಾಢ್ಯವಾಗಿದೆ ಎಂದರೆ ತಪ್ಪಾಗಲಾರದು.

## ಶೈಕ್ಷಣಿಕ ಪರಿಸ್ಥಿತಿ

ಶಿಕ್ಷಣವಿದ್ದ ನಾಡು, ಗ್ರಾಮಗಳು, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿಯೂ ಅಭಿವೃದ್ಧಿ ಹೊಂದಲು ಸಾಧ್ಯ. ಶಿಕ್ಷಣವಿಲ್ಲದಿದ್ದರೆ ಮೇಲಿನ ಯಾವ ಕಾರ್ಯವೂ ವ್ಯವಸ್ಥಿತವಾಗಿ ನಡೆಯುವುದಿಲ್ಲ. ಅಲ್ಲದೇ ಯಾವುದೇ ಗ್ರಾಮ ತನ್ನ ಗೊಡ್ಡು ಸಂಪ್ರದಾಯ ಮೌಢ್ಯಗಳನ್ನು ಮೀರಿ ಬೆಳೆಯಲು ಸಾಧ್ಯವಾಗುವುದಿಲ್ಲ. ಶಿಕ್ಷಣ ಎಂಬುದು

ಪ್ರತಿಯೊಬ್ಬನ ಹಕ್ಕು. ಅದನ್ನು ಪಡೆಯುವುದರಿಂದ ಅನ್ಯಾಯದ ವಿರುದ್ಧ ಎಚ್ಚೆತ್ತುಕೊಳ್ಳಬಹುದು. ಹಾಗಾಗಿ ಭಾರತದ ಸಂವಿಧಾನ ಪ್ರತಿಯೊಬ್ಬರಿಗೂ ಶಿಕ್ಷಣ ವ್ಯವಸ್ಥೆ ಕಲ್ಪಿಸಿದೆ. ಶಿಕ್ಷಣಕ್ಕೆ ಯಾವುದೇ ಧರ್ಮ,ಜಾತಿ ಅಡ್ಡಬರುವಂತಿಲ್ಲ.

ಕಬ್ಬಳಿ ಗ್ರಾಮವು ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿದೆ. ಇಲ್ಲಿ ಉನ್ನತ ಶಿಕ್ಷಣ ಪಡೆದವರು ಕೇವಲ ಒಬ್ಬಿಬ್ಬರು ಮಾತ್ರ. ಪದವಿ ಪಡೆದವರ, ಪಿ.ಯು.ಸಿ.ಹಂತ ತಲುಪಿದವರ ಸಂಖ್ಯೆ ಪ್ರಗತಿದಾಯಕವಲ್ಲದಿದ್ದರೂ ಉತ್ತಮವಾಗಿದೆ. ಖ್ಯಾತ ಕಾದಂಬರಿಕಾರ ಎಸ್.ಎಲ್.ಭೈರಪ್ಪನವರ ಸ್ನೇಹಿತನೆಂದು ಹೇಳುವ ಈ ಕಬ್ಬಳಿಯ 55ರ ಹರೆಯದ ಕೆ.ಬಸವೇಗೌಡ, ಶಾಲೆ ಕಲಿಯಲು ಹೋಗಿದ್ದು ಹಾಸನಕ್ಕೆ. ಅಲ್ಲಿ ಓದಿದ್ದು ಕೇವಲ ಆರನೇ ತರಗತಿ ಮಾತ್ರ. ಆರನೇ ತರಗತಿ ಓದಿರುವ ಬಸವೇಗೌಡ ಹಲವು ರೀತಿಯ ಪದ್ಯಗಳನ್ನು ಬರೆದಿದ್ದಾರೆ. ಆದರೆ ಅವೆಲ್ಲೂ ಬೆಳಕು ಕಂಡಿಲ್ಲ. ಅದರಲ್ಲಿ ನಳದಮಯಂತಿ ಕಥೆ ವಿಭಿನ್ನವಾಗಿದೆಯಂತೆ. ಕಬ್ಬಳಿ ಗ್ರಾಮದ ಜನತೆ 1930 ಕ್ಕೂ ಹಿಂದೆ ಶಾಲೆ ಕಲಿಯಲು ಹಾಸನ ಇತ್ಯಾದಿ ಕಡೆ ಹೋಗಬೇಕಾಗಿತ್ತು. ಅನಂತರ ಕಬ್ಬಳಿಯಲ್ಲೆ ಸರ್ಕಾರ ಒಂದರಿಂದ ಏಳನೇ ತರಗತಿಯವರೆಗೆ ಒಂದು ಶಾಲೆಯನ್ನು ತೆರೆದಿತ್ತಾದರೂ ಅದರ ಉಪಯೋಗ ಪಡೆದವರು ಕೆಲವರು ಮಾತ್ರ. ಕಬ್ಬಳಿಯಲ್ಲಿ ಓದಿ ಮುಗಿಸಿದ ಹುಡುಗರನ್ನು ಅವರ ಪೋಷಕರು ಮುಂದಿನ ಓದಿಗೆ ಹಚ್ಚಲು ಪ್ರಯತ್ನಿಸುತ್ತಿರಲಿಲ್ಲ. ಕಾರಣ ಬೇರೆ ಊರಿಗೆ ಹೋಗಿ ಓದುವುದಕ್ಕಿಂತ ಇಲ್ಲಿ ಕೆಲಸ ಮಾಡಿ ಬದುಕಲಿ ಎಂಬ ಮನೋಭಾವ.

ಅನಂತರ ಖಾಸಗಿ ಸಂಸ್ಥೆಯೊಂದು ಕಬ್ಬಳಿಯಲ್ಲಿ ಒಂದರಿಂದ ಹತ್ತನೇ ತರಗತಿಯವರೆಗೆ ಶಾಲೆ ತೆರೆದಾಗ ಬಹಳಷ್ಟು ವಿದ್ಯಾರ್ಥಿಗಳು ಮೆಟ್ರಿಕ್ ಹಂತ ತಲುಪುವ ಅವಕಾಶ ಪಡೆದರು. ಆದರೆ ಈ ಖಾಸಗಿ ಸಂಸ್ಥೆ ಸರಿಯಾಗಿ ಕಾರ್ಯ ನಿರ್ವಹಿಸದ ಕಾರಣ ಶಾಲೆ ಬಾಗಿಲು ಹಾಕಬೇಕಾಯಿತು. ಹೀಗಾಗಿ ಕುಂಟುತ್ತಾ ಸಾಗಿದ ಕಬ್ಬಳಿಯಲ್ಲಿನ ಶಿಕ್ಷಣ ವ್ಯವಸ್ಥೆ ಹೊಸ ರೂಪ ಪಡೆದಿದ್ದು 2002ನೇ ಇಸವಿಯಲ್ಲಿ ಶ್ರೀ ಆದಿಚುಂಚನಗಿರಿ ಮಠಾಧೀಶರಾದ

ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ನೇತೃತ್ವದಲ್ಲಿ. ಒಂದರಿಂದ ಹತ್ತನೇ ತರಗತಿಯವರೆಗೆ ಇಂಗ್ಲೀಷ್ ಮತ್ತು ಕನ್ನಡ ಮಾಧ್ಯಮದಲ್ಲಿ ಶಾಲೆ ತೆರೆದು ಇಂದಿಗೂ ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ. ಇದರಿಂದ ಬಡವಿದ್ಯಾರ್ಥಿಗಳಿಗೆ ಪ್ರಯೋಜನವಾಗಿರುವುದಲ್ಲದೆ ವಿದ್ಯಾರ್ಥಿಗಳ ಅನುಕೂಲಕ್ಕೆ ಬಸ್ ವ್ಯವಸ್ಥೆಯನ್ನು ಮಾಡಲಾಗಿದೆ.

ಶೋಚನೀಯ ಸಂಗತಿಯೆಂದರೆ ಎಸ್.ಎಸ್.ಎಲ್.ಸಿ. ಮುಗಿಸಿದ ಅನಂತರ ಮುಂದೆ ಓದಲು ನುಗ್ಗೇಹಳ್ಳಿ ಅಥವಾ ಚನ್ನರಾಯಪಟ್ಟಣದ ಕಾಲೇಜುಗಳಿಗೆ ಹೋಗಬೇಕಾಗಿದ್ದು, ಈ ಗ್ರಾಮ ಈ ಊರುಗಳಿಂದ ದೂರವಿದ್ದು ಸಮಯಕ್ಕೆ ಸರಿಯಾಗಿ ಬಸ್ಸಿನ ವ್ಯವಸ್ಥೆ ಇರುವುದಿಲ್ಲ. ಆದರೂ ವಿದ್ಯಾರ್ಥಿಗಳು ಈ ಅನಾನುಕೂಲತೆಯ ನಡುವೆಯೇ ಪದವಿ ಹಂತದವರೆಗೆ ಶಿಕ್ಷಣ ಪಡೆಯುತ್ತಿದ್ದರೂ ಅವರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ. ಒಟ್ಟಾರೆ ಸಂಪೂರ್ಣ ಶಿಕ್ಷಣ ಈ ಗ್ರಾಮಕ್ಕೆ ತಲುಪಬೇಕಾದರೆ ಸರ್ಕಾರ ಸರಿಯಾದ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕಾಗಿದೆ.

ಸರ್ಕಾರ ಶಿಕ್ಷಣಕ್ಕೆ ಬಹಳಷ್ಟು ಮಹತ್ವ ನೀಡುತ್ತಿದ್ದು ಅದು ಕಬ್ಬಳಿಯಂತಹ ಗ್ರಾಮಗಳು ಅದರ ಸಂಪೂರ್ಣ ಪ್ರಯೋಜನ ಪಡೆಯದೇ ಇರುವುದು ದುರದೃಷ್ಟಕರ ಸಂಗತಿ. ಒಂದು ಗ್ರಾಮ ಮತ್ತು ವ್ಯಕ್ತಿಯ ಬದುಕು ಹಸನಾಗುವುದು ಶಿಕ್ಷಣದ ಗುಣಾತ್ಮಕತೆಯ ಜೊತೆಗೆ ಶಿಕ್ಷಣದ ಮಹತ್ವವನ್ನು ಅರಿತಾಗ. ಕಬ್ಬಳಿಯ ಸುತ್ತಮುತ್ತಲ ಅನೇಕ ಗ್ರಾಮಗಳು ಇಂಥ ಶೋಚನೀಯ ಸ್ಥಿತಿಗೆ ಒಳಗಾಗಿವೆ. ಸರ್ಕಾರ ಈ ನಿಟ್ಟಿನಲ್ಲಿ ಇನ್ನೂ ಪ್ರಮುಖ ಕಾರ್ಯಕ್ರಮ ಕೈಗೊಳ್ಳುವ ಜೊತೆಗೆ ಸಾರಿಗೆ ವ್ಯವಸ್ಥೆ ಉತ್ತಮಪಡಿಸಬೇಕಾಗಿದೆ.

## ಧಾರ್ಮಿಕ ಸ್ಥಿತಿಗತಿ

ಒಂದು ರಾಜ್ಯದಲ್ಲಿ ಹಲವು ಜಾತಿಗಳು ಇರುವಂತೆಯೇ ಹಲವು ಧರ್ಮಗಳು ಇವೆ. ಆ ಧರ್ಮಗಳಿಗೆ ತಮ್ಮದೇ ಧಾರ್ಮಿಕ ಆಚರಣೆಗಳಿವೆ. ಹಾಗೆಯೇ ಕಬ್ಬಳಿ ಗ್ರಾಮದಲ್ಲಿ ಹಲವಾರು ಜಾತಿಗಳ ಜನರಿದ್ದು ಎಲ್ಲರೂ ಹಿಂದೂಗಳೇ ಆಗಿದ್ದಾರೆ. ಹಿಂದೂ ಧರ್ಮಕ್ಕೆ ಪ್ರಮುಖವೆನಿಸಿದ ಧಾರ್ಮಿಕ ಹಬ್ಬ ಹರಿದಿನಗಳನ್ನು ಕಬ್ಬಳಿ ಗ್ರಾಮದಲ್ಲಿ ತುಂಬ ಆಸಕ್ತಿಯಿಂದ ಆಚರಿಸುತ್ತಾರೆ. ಯುಗಾದಿ, ದೀಪಾವಳಿ ಮತ್ತು ಶಿವರಾತ್ರಿ ಹಬ್ಬಗಳನ್ನು ಬಲು ಸಡಗರದಿಂದ ಆಚರಣೆ ಮಾಡುತ್ತಾರೆ.

ಶಿವರಾತ್ರಿಯ ದಿನ ಕಬ್ಬಳಿಯ ಗ್ರಾಮದಲ್ಲಿ ತೇರನ್ನು ಎಳೆಯುವುದರೊಂದಿಗೆ ರಂಗದಕುಣಿತ, ಸೋಬಾನೆ ಪದ ಹಾಡುವುದು ಇತ್ಯಾದಿ ಆಚರಣೆಯೊಂದಿಗೆ ಜನರೆಲ್ಲರೂ ಸೇರಿ ಒಗ್ಗಟ್ಟಿನಿಂದ ಹಬ್ಬ ಮಾಡುತ್ತಾರೆ. ಯುಗಾದಿ ಹಬ್ಬವನ್ನು ಎಲ್ಲಾ ಜನರು ಆಚರಣೆ ಮಾಡಿದರೆ, ದೀಪಾವಳಿಯನ್ನು ದಲಿತರಲ್ಲಿ ಕೆಲವರು ಪ್ರಮುಖವಾಗಿ ಆಚರಿಸಿದರೆ ಒಕ್ಕಲಿಗರಲ್ಲಿ ಕೆಲವು ಮಂದಿ ಅತೀ ವಿಜೃಂಭಣೆಯಿಂದ ಆಚರಿಸುತ್ತಾರೆ.

ಹೀಗೆ ಹಿಂದೂ ಧರ್ಮ ಒಂದೇ ಕಬ್ಬಳಿಯಲ್ಲಿದೆ. ವಿವಿಧ ಹಬ್ಬಗಳನ್ನು ವಿವಿಧ ಜನಾಂಗಗಳು ಶ್ರೇಷ್ಠವೆಂದು ತಿಳಿದು ಆಚರಣೆ ಮಾಡುತ್ತಾರೆ. ಅವುಗಳಲ್ಲಿ ನಾಗರಹಬ್ಬ, ದೊಡ್ಡಮ್ಮನ ಹಬ್ಬ, ಮಾರಿಹಬ್ಬ, ಮುನಿಯಪ್ಪನ ಹಬ್ಬ, ಇತ್ಯಾದಿಗಳು ಪ್ರಮುಖವಾಗಿದೆ. ಈ ಬಗ್ಗೆ ಗ್ರಾಮದ ದೇವರಾಜುರವರನ್ನು ಕೇಳಿದಾಗ ಈ ಹಬ್ಬಗಳನ್ನು ನಮ್ಮ ಹಿಂದಿನವರು ಆಚರಿಸುತ್ತಿರುವುದರಿಂದ ನಾವು ಆಚರಿಸುತ್ತಿದ್ದೇವೆ. ಈ ಹಬ್ಬಗಳ ಬಗ್ಗೆ ನಿಖರವಾದ ಮಾಹಿತಿ ತಿಳಿದಿಲ್ಲ ಎಂದು ಹೇಳಿದರು. ಇವುಗಳ ಜೊತೆಗೆ ಲಕ್ಕಮ್ಮ, ಹೊನ್ನಮ್ಮ, ದೊಡ್ಡಮ್ಮ, ಹುಚ್ಚಮ್ಮ, ಗ್ರಾಮದೇವತೆಗಳಾಗಿದ್ದು, ಇವುಗಳಿಗೆ ಪ್ರಾಣಿ ಬಲಿಕೊಡುವ ಮೂಲಕ ಜನರು ಈ ದೇವತೆಗಳನ್ನು ಪೂಜಿಸುತ್ತಾರೆ. ವಿವಿಧ ಜಾತಿಯ ಜನಗಳಿರುವ ಕಬ್ಬಳಿಯಲ್ಲಿ ಪ್ರತಿಯೊಂದು ಜಾತಿಗೂ ಒಂದೊಂದು ದೇವತೆ ಶ್ರೇಷ್ಠ ಮತ್ತು ಮಾನ್ಯ. ಊರಿನಲ್ಲಿ ಧಾರ್ಮಿಕ ಮತೀಯ ಅಂಶಗಳು

ತಾತ್ವಿಕವಾಗಿ ಭಿನ್ನತೆ ಕಂಡುಬರುವುದಿಲ್ಲವಾದರೂ ಆಚರಣೆಯಲ್ಲಿ ಭಿನ್ನವಾಗಿವೆ. ತಮ್ಮ ಏಳುಬೀಳುಗಳಿಗೆ ದೇವರನ್ನು ಈ ಜನ ಬಲವಾಗಿ ನಂಬಿಕೊಂಡಿದ್ದಾರೆ. ದೇವರಿಲ್ಲದೆ ನಾವಿಲ್ಲ ದೇವರಿಂದ ನಾವು ಎಂಬ ನಂಬಿಕೆಯನ್ನು ಕಬ್ಬಳಿಯ ಜನ ಬಲವಾಗಿ ಹಿಡಿದಿದ್ದಾರೆ.

ಹೀಗೆ ಕಬ್ಬಳಿಯು ಸಾಮಾಜಿಕ, ಆರ್ಥಿಕ, ರಾಜಕೀಯ ಶೈಕ್ಷಣಿಕ ಮತ್ತು ಧಾರ್ಮಿಕ ಹಿನ್ನಲೆಗಳನ್ನು ಒಳಗೊಂಡಿವೆ. ಅನೇಕ ಸರಿ-ತಪ್ಪು, ಏಳು-ಬೀಳುಗಳೊಂದಿಗೆ ಇವು ಮುಂದುವರೆದುಕೊಂಡು ಬಂದಿವೆ.

ಅಧ್ಯಾಯ-4

# ಕಬ್ಬಳಿಯ ಸಾಂಸ್ಕೃತಿಕ ಹಿನ್ನಲೆ

ಸಾಹಿತ್ಯದಲ್ಲಿ ಎರಡು ವಿಧ ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯ ಇವುಗಳನ್ನು ಕುರಿತು ಆಚಾರ್ಯ ಬಿ.ಎಂ.ಶ್ರೀ ಅವರು "ಜನವಾಣಿ ಬೇರು ಕವಿವಾಣಿ ಹೂವು" ಎಂದು ತುಂಬ ಮೌಲಿಕವಾದ ಮಾತನ್ನಾಡಿದ್ದಾರೆ. ಶಿಷ್ಟ ಸಾಹಿತ್ಯ ಅಕ್ಷರ ಬಲ್ಲ ಪಂಡಿತಮಾನ್ಯರದು. ಬರವಣಿಗೆ ಇದರ ಲಕ್ಷಣ. ಇದನ್ನು ಬರೆದವರ ಹೆಸರು,ಕಾಲ,ದೇಶ ಎಲ್ಲ ಗೊತ್ತಿರುತ್ತದೆ. ಆದರೆ ಜನಪದ ಸಾಹಿತ್ಯ ಶ್ರೀ ಸಾಮಾನ್ಯರ ಸಾಹಿತ್ಯ. ಇದನ್ನು ಯಾರು ರಚಿಸಿದರು ಯಾವಾಗ ರಚಿಸಿದರು ಯಾವುದೂ ಗೊತ್ತಿಲ್ಲ. ಜನಪದರಲ್ಲಿ ಪ್ರತಿಭಾವಂತರಾದವರು ಇದನ್ನು ರಚಿಸಿರುತ್ತಾರೆ. ಆದರೆ ಅದು ವ್ಯಕ್ತಿಯೊಬ್ಬನ ರಚನೆಯಾಗಿರದೆ ಇಡೀ ಸಮುದಾಯದ ಅನುಭವವಾಗಿ ಬಾಯಿಂದ ಬಾಯಿಗೆ ಪೀಳಿಗೆಯಿಂದ ಪೀಳಿಗೆಗೆ ಉಳಿದು ಬಂದಿದೆ.

ಕುಟ್ಟುವುದು, ಬೀಸುವುದು, ಬೇಸಾಯ ಮಾಡುವುದು, ಇತ್ಯಾದಿ, ನಿತ್ಯದ ಕೆಲಸಗಳಲ್ಲಿ ತೊಡಗಿದ್ದಾಗ ಜನಪದರು ಕಥೆ, ಒಗಟು, ಗೀತೆ ಮುಂತಾದವುಗಳನ್ನು ಹೇಳುತ್ತಾರೆ. ಒಬ್ಬರಿಂದ ಕೇಳಿದ ರಚನೆಗಳು ಹಲವರ ನೆನಪಿನಲ್ಲಿ ಉಳಿದು ಮತ್ತೇ ಅಂಥದೇ ಸಂದರ್ಭದಲ್ಲಿ ದನಿ ಪಡೆದು ಒಬ್ಬರಿಂದ ಹಲವರಿಗೆ ಹರಡುತ್ತವೆ. ಆ ಹಾಡು, ಕಥೆಗಳಲ್ಲಿರುವ ನೋವು, ನಲಿವು, ಆಸೆ, ಆಕಾಂಕ್ಷೆ ಎಲ್ಲರ ಬಾಳಿನ ನೋವು, ನಲಿವು, ಆಕಾಂಕ್ಷೆಗಳಾಗಿರುವುದರಿಂದ ಅವು ಅವರ ಬದುಕಿನ ಅವಿಭಾಜ್ಯ ಅಂಗವಾಗುತ್ತವೆ. ಇವನ್ನು ಹಾಡುವ, ಹೇಳುವ ಮುಖೇನ ಈ ಜನ ಪರ್ಯಾಯವಾಗಿ ತಮ್ಮ ನೋವು, ನಲಿವು, ಆಸೆ, ಆಕಾಂಕ್ಷೆಗಳನ್ನು ತೋಡಿಕೊಳ್ಳುತ್ತಾರೆ. ಹೀಗೆ ಕೆಲಸ ಕಾರ್ಯಗಳಲ್ಲಿ ನಿರತರಾಗಿದ್ದಾಗ ಶ್ರಮ ಪರಿಹಾರ ಮನರಂಜನೆ ಮತ್ತು ಅನುಭವ ನಿವೇದನೆ ಮುಂತಾದ ಉದ್ದೇಶಗಳಿಂದ ಹಾಡುವ, ಹೇಳುವ ರಚನೆಗಳು ಜನಪದ ಸಾಹಿತ್ಯದಲ್ಲಿ ಒಂದು ಭಾಗ ಮತ್ತು ಇವು ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಅಂಶಗಳೂ ಹೌದು.

ಒಂದು ನಿರ್ಧಿಷ್ಟ ಪ್ರದೇಶದಲ್ಲಿ ಬದುಕುತ್ತಿರುವ ಜನತೆಯ ನಂಬಿಕೆಗಳು, ಬಹಳಷ್ಟು ಸಮಾನವಾಗಿರುತ್ತವೆ. ಅವರು ನಂಬುವ ದೈವ, ಆಚರಿಸುವ ಹಬ್ಬ ಜಾತ್ರೆ, ಮದುವೆಯ ರೀತಿ, ನೀತಿ, ಇವೆಲ್ಲವೂ ಅವರನ್ನು ಸಮಾನ ಸಂಸ್ಕೃತಿಯ ನೆಲೆಯಲ್ಲಿ ಒಂದುಗೂಡಿಸಿರುತ್ತವೆ. ಈ ರೀತಿ ಗುಂಪು ಕೂಡಿ ನಡೆಸುವ ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳ ಸಂದರ್ಭದಲ್ಲಿ ತಮ್ಮ ದೈವವನ್ನು ಕುರಿತು ಕಟ್ಟಿದ ಹಾಡು, ನಂಬಿಕೆ, ನಡಾವಳಿಗಳ ಹಿನ್ನೆಲೆಯನ್ನು ಕುರಿತು ಹುಟ್ಟಿಕೊಂಡ ಸಾಹಿತ್ಯ ಇಡೀ ಸಮುದಾಯದ ಸಂಪತ್ತಾಗುತ್ತದೆ. ಅಲ್ಲಿನ ಭಾವನೆ ವಿಚಾರಗಳಲ್ಲಿ ಪ್ರತಿಯೊಬ್ಬರು ಭಾಗಿಯಾಗುತ್ತಾರೆ. ಹೀಗೆ ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಸಾಹಿತ್ಯಭಾಗವೂ ಜನಪದ ಸಾಹಿತ್ಯದಲ್ಲಿ ಉಂಟು. ಇದರ ಉದ್ದೇಶ ಮನರಂಜನೆಯ ಪೂಜೆ, ಆರಾಧನೆ.

ಇಂತಹ ಜನಪದ ಗೀತೆ ಕಥೆಕಲೆಗಳನ್ನು ಕಬ್ಬಳಿ ಗ್ರಾಮದಲ್ಲಿ ವಿಶೇಷವಾಗಿ ಗಮನಿಸಬಹುದು. ಆಧುನಿಕತೆ ಎಷ್ಟೇ ವ್ಯಾಪಿಸಿದ್ದರೂ ಬೀಸುವ ಕಲ್ಲಿನ ಸದ್ದು ದಲಿತರ ಕೇರಿಯಲ್ಲಿ ಈಗಲೂ ಕೇಳಿ ಬರುತ್ತದೆ. ಇಲ್ಲಿನ ಜನರು, ಕುಟ್ಟುವ, ಬೀಸುವ, ನಾಟಿಹಾಕುವ, ತೊಟ್ಟಿಲು ತೂಗುವ ಹಲವು ಕೆಲಸಗಳಲ್ಲಿ ನಿರತರಾಗಿದ್ದಾಗ ಬೇಸರ ನಿವಾರಣೆಗಾಗಿ, ಶ್ರಮಪರಿಹಾರಕ್ಕಾಗಿ, ಅನುಭವ ನಿವೇದನೆಗಾಗಿ, ಕೆಲಸದ ಗತಿಗನುಗುಣವಾಗಿ ಪದಕಟ್ಟಿ ಹಾಡುತ್ತಾರೆ. ಈ ಪದಗಳೇ ಜನಪದ ಗೀತೆಗಳು ಇವು ಕಂಠಸ್ತ ಸಂಪ್ರದಾಯದಲ್ಲಿ ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿರುವುದನ್ನು ಗಮನಿಸಬಹುದು.

ಕೆಲಸ ಕಾರ್ಯಗಳಾದ ಮೇಲೆ ಜನಪದ ಜೀವನದ ಬಹಳ ಮುಖ್ಯವಾದ ಮತ್ತೊಂದು ಕ್ಷೇತ್ರ ಧಾರ್ಮಿಕ–ಸಾಂಸ್ಕೃತಿಕ ರಂಗ. ಇದು ಅವರ ನಂಬಿಕೆ ನಡಾವಳಿಗಳಿಗೆ ಸಂಬಂಧಿಸಿದ ಕ್ಷೇತ್ರ, ತಮ್ಮ ಬದುಕಿನ ಆಗುಹೋಗುಗಳೆಲ್ಲವಕ್ಕೂ ಆಸರೆಯಾಗಿ ನಿಂತ ದೈವದ ಬಗ್ಗೆ ಕಬ್ಬಳಿಯ ಜನರ ನಂಬಿಕೆ ಗಟ್ಟಿಯಾದುದು.

“ಬಸವೇಶ್ವರ ನಿನ ಹೊರತು ನಾನ್ಯಾರ ನಂಬಿಲ್ಲ

ನಾ ಮಾಡನೆಂಬ ಆಳವಿಲ್ಲ ! ಬಸವೇಶ

ನೀ ನಡೆಸು ನನ್ನ ಸರುವೆಲ್ಲ”

ಎಂದು ಸರ್ವಸಮರ್ಪಣ ಭಾವದಲ್ಲಿ ಆ ದೈವಕ್ಕೆ ತಮ್ಮನ್ನು ಒಪ್ಪಿಸಿಕೊಳ್ಳುತ್ತಾರೆ. ತಾವು ನಂಬಿದ ದೈವದ ಹಬ್ಬ ಜಾತ್ರೆ ಆಚರಿಸುತ್ತಾರೆ. ಹೀಗೆ ಆಚರಣೆಯ ಸಂದರ್ಭದಲ್ಲಿ ಹುಟ್ಟಿಕೊಂಡ ಹಾಡುಗಳು ಜನಪದ ಸಂಸ್ಕೃತಿಯ ಜೀವನಾಡಿಗಳಾಗಿವೆ. ಕೋಲಾಟ, ಕಂಸಾಳೆ, ನೃತ್ಯ, ರಂಗದ ಕುಣಿತ ಇತ್ಯಾದಿ ಹಲವು ವಿವಿಧ ಜನಪದ ನೃತ್ಯಗಳ ಸಂದರ್ಭದಲ್ಲಿಯೂ ಕೆಲವು ಗೀತೆಗಳನ್ನು ಕಬ್ಬಳಿಯ ಜನಪದರು ಹಾಡುತ್ತಾರೆ. ಪ್ರಾಚೀನ ಮಾನವ ತನಗೆ ಸಂತೋಷವಾದಾಗ ಕೂಗಿ ಕುಣಿದು ಆ ಭಾವವನ್ನು ಅಭಿವ್ಯಕ್ತಗೊಳಿಸಿದ. ಪ್ರಕೃತಿಯಲ್ಲಿ ತನಗೆ ಅರ್ಥವಾಗದ ಶಕ್ತಿಗಳ ಬಗ್ಗೆ ಭಯಪೂರ್ಣ ಭಕ್ತಿ ತಳೆದ. ಕುಣಿದು ಹಾಡಿ ತನ್ನ ಭಕ್ತಿಯನ್ನು ವ್ಯಕ್ತಗೊಳಿಸಿದ ಜನಪದ ಕಲೆಗಳ ಉಗಮ ಆ ಕುಣಿತಗಳ ಮೂಲದಲ್ಲಿದೆ. ಜನಪದ ಕಲೆಗಳ ಅಧ್ಯಯನವೆಂದರೆ ಅವರ ಬದುಕಿನ ಸಾಮಾಜಿಕ, ಸಾಂಸ್ಕೃತಿಕ, ಅಧ್ಯಯನ. ಜನಪದ ಕಲೆಗಳಿಗೂ ಜನಪದ ಸಾಹಿತ್ಯಕ್ಕೂ ಅವಿನಭಾವ ಸಂಬಂಧವಿದೆ. ಸಂಗೀತ, ನೃತ್ಯ, ದೃಶ್ಯ ಯಾವುದೇ ಪ್ರಕಾರದಲ್ಲಿ ಜನಪದ ಕಲೆ ಪ್ರಕಟಗೊಂಡರೂ ಅದರ ಅವಿಭಾಜ್ಯ ಅಂಗವಾಗಿ ಸಾಹಿತ್ಯವು ಸ್ಥಾನ ಪಡೆದಿರುವುದನ್ನು ಬಹುತೇಕ ಕಲೆಗಳಲ್ಲಿ ಕಾಣಬಹುದು. ಜನಪದ ಸಾಹಿತ್ಯದಂತೆ ಜನಪದ ಕಲೆಯೂ ಮನರಂಜನೆ ಆರಾಧನೆ ಎಂಬ ಉದ್ದೇಶಗಳ ನೆಲೆಯಲ್ಲಿ ಹುಟ್ಟಿ ಬೆಳೆದಿದೆ. ಕಬ್ಬಳಿಯ ಜನರು ತಮ್ಮ ಮನಸ್ಸಿಗೆ ಸಂತೋಷ, ನೆಮ್ಮದಿ,ಜೀವನೋತ್ಸಾಹಗಳನ್ನು ಕಂಡುಕೊಳ್ಳುವಲ್ಲಿ ಈ ಕಲೆಗಳು ಸಹಾಯಕವಾಗಿದೆ.

ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಿರುವ ವರ್ಗಗಳಲ್ಲಿ ಜನಪದ ಕಲೆ ಮತ್ತು ಸಾಹಿತ್ಯ ಅಪಾರವಾಗಿ ಕಂಡು ಬರುತ್ತದೆ. ಕೆಲವು ಜನಪದ ಕಲೆಗಳಂತೂ ವೃತ್ತಿ ಮೂಲದಲ್ಲಿ ಅರಳಿದವುಗಳಾಗಿವೆ. ನಿರ್ಧಿಷ್ಟ ಜಾತಿಗೆ ಮಾತ್ರ ಸಂಬಂಧಿಸಿವೆ. ಒಟ್ಟಿನಲ್ಲಿ

ಕರ್ನಾಟಕದ ಸಾಂಸ್ಕೃತಿಕ, ಸಾಮಾಜಿಕ ಜೀವನದ ಅಧ್ಯಯನ ಮಾಡಬಯಸುವವರಿಗೆ ಕಬ್ಬಳಿ ಗ್ರಾಮದ ಜನಪದ ಕಲೆಗಳು ಕೂಡ ಒಳ್ಳೆಯ ಆಕರಗಳಾಗಿವೆ. ಇಂಥ ಪ್ರಮುಖವಾದ ಇಲ್ಲಿನ ಕಲೆಗಳಲ್ಲಿ "ಕೋಲಾಟ"ವೂ ಒಂದು.

ಮಹಾನವಮಿ ಕಾಲ, ಹೊಲಗಳಲ್ಲಿ ಪೈರು ಹಚ್ಚಹಸುರಾಗಿ ಉಸಿರಾಡುತ್ತದೆ. ರೈತ ಮಕ್ಕಳ ಮುಖದ ಮೇಲೆ ಸಂತೋಷವೇ ನಗುವಾಗಿ ಮಿಂಚಿದೆ. ಊರಿನಲ್ಲಿ ಜನ ಗುಂಪು ಗುಂಪಾಗಿ ಬಂದು ಸೇರುತ್ತಿದ್ದಾರೆ. ದೇವರು ಆಗಲೇ ರಥವೇರಿದೆ ಜನರೆಲ್ಲ ಸುತ್ತಲೂ ನೋಡುತ್ತಾ ನಿಂತಿದ್ದಾರೆ. "ಕೋಲು ಹೊಯ್ಯು"ವ ಸದ್ದು ಕೇಳಿಬರುತ್ತದೆ. ಹಾಲಿಗೆ ಸಕ್ಕರೆ ಬೆರತಂತೆ ಕೋಲು ಸದ್ದಿಗೆ ಗೆಜ್ಜೆ ಸದ್ದು ಇದಕ್ಕೆ ಮೇಳವಾಗಿ

"ಕೋಲು ಮಾತಾಡುತಾವೆ
ಬೆಳ್ಳಿಗೆಜ್ಜೆ ಮಾತಾಡುತಾವೆ"

ಎಂಬ ಲಯಪೂರ್ಣವಾದ ಹಾಡು ಹಾಡಿಗನುಗುಣವಾಗಿ ಒಂದಷ್ಟು ಜನ ಕುಣಿಯುತ್ತಾ ಕೋಲು ಹೊಯ್ಯುತ್ತಾರೆ. ತಲೆಗೆ ಹಳದಿ ಬಣ್ಣದ ಬಟ್ಟೆ ಕಟ್ಟಿ, ವೀರಗಚ್ಚೆ ಹಾಕಿ, ತುಂಡು ತೋಳಿನ ಅಂಗಿತೊಟ್ಟು, ಕಾಲಿಗೆ ಗೆಜ್ಜೆ ಕಟ್ಟುತ್ತಾರೆ. ಎಲ್ಲರ ಕೈಯಲ್ಲೂ ಮುಕ್ಕಾಲು ಅಡಿ ಉದ್ದದ ಎರಡೆರಡು ಕೋಲುಗಳಿರುತ್ತವೆ. ಕೋಲಿನ ಹಿಡಿಭಾಗಕ್ಕೆ ತೂತು ಮಾಡಿ ಗೆಜ್ಜೆ ಕಟ್ಟಿರುತ್ತಾರೆ. ವೃತ್ತಾಕಾರವಾಗಿ ಕುಣಿಯುತ್ತಾ ಇರುವ ಇವರ ನಡುವೆ ಒಬ್ಬ ಕಂಜರವಿಡಿದು ತಾಳಕ್ಕೆ ತಕ್ಕಂತೆ ನುಡಿಸುತ್ತಿರುತ್ತಾನೆ. ಅವನ ಪಕ್ಕದಲ್ಲಿಯೇ ನಿಂತ ಮತ್ತೊಬ್ಬ ಕಂಚಿನ ತಾಳ ಹಾಕುತ್ತಾನೆ. ತಾಳ ಹಾಕುವವನೆ ಹಾಡು ಹೇಳಿಕೊಡುತ್ತಾನೆ. ಕುಣಿಯುವವರು ಹಾಡಿನ ಪಲ್ಲವಿಯನ್ನು ಹಾಡುತ್ತಾ ಕುಣಿಯುತ್ತಾರೆ. ಮಂದಗತಿಯಲ್ಲಿದ್ದ ಹಾಡು ಮಧ್ಯಮಕ್ಕೆ, ಮಧ್ಯಮದಿಂದ ತಾರಕಕ್ಕೆ ಏರುತ್ತದೆ. ಹಾಡನ್ನು ಅನುಸರಿಸಿ ಕುಣಿಯುವವರ ಗತ್ತು ಉತ್ಸಾಹದಿಂದ ವೇಗಶೀಲವಾಗುತ್ತದೆ. ಅವರ ಉತ್ಸಾಹಕ್ಕೆ ಮೇರೆ ಇಲ್ಲ. ಆನಂದಕ್ಕೆ ಪಾರವಿಲ್ಲ. ಕುಣಿಯುವ ಭಾವಭಂಗಿಗಳಿಗೆ ಲೆಕ್ಕವಿಲ್ಲ. ಒಬ್ಬೊಬ್ಬರದು ಒಂದೊಂದು ಠೀವಿ. ಒಂದೊಂದು ಮೋಡಿ.

ತಾನು ಬೇರೆಯವರಿಗಿಂತ ಉತ್ತಮವಾಗಿ ಕುಣಿಯಬೇಕು ಎಂಬುದೇ ಪ್ರತಿಯೊಬ್ಬನ ಮನೋಭಾವ.ಹೀಗಾಗಿ ಆಟದ ಒಟ್ಟಾರೆಯ ಪರಿಣಾಮ ಭಲೆ ಭಾಪುರೇ ಎನ್ನುವಂತಹುದು.

**ಕೋಲಾಟದ ಪದಗಳು**

ಗಜಾನನ ನಮ್ಮ ಗಣನಾಥನ

ಆ ವಿನಯದಿ ಭಜಿಸುವ ಗಜಾನನ

ಆ ಮೂಷಿಕ ವಾಹನ ಗಜಾನನ

ಆ ನಮ್ಮ ಗೌರಿ ಕುಮಾರಗೆ ಗಜಾನನ

ಆ ನಮ್ಮ ಶಿವನ ಕುಮಾರನಿಗೆ ಗಜಾನನ

ಕರಿಯಾನೆ ಮುಖದವಗೆ ಗಜಾನನ

ನಿನಗೆ ಕೈ ಮುಗಿದು ಬೇಡುವೇ ಗಜಾನನ

ಆ ಗಜಾನನ ನಮ್ಮ ಗಣನಾಥನ

ವಿನಯದಿ ಭಜಿಸುವ ಗಜಾನನ

ಮಾಡುವ ಕೆಲಸಕ್ಕೆ ಗಜಾನನ

ನೀ ಮರೆಯಲು ಬೇಡ ಗಜಾನನ

ಆಗುವ ಕೆಲಸಕ್ಕೆ ಗಜಾನನ

ನೀ ಆಡಲು ಆಗಬೇಡ ಗಜಾನನ

ಗಜಾನನ ನಮ್ಮ ಗಜಾನನ

ವಿನಯದಿ ಭಜಿಸುವೆ ಗಜಾನನ

ತಪ್ಪು ನೆಪ್ಪುಗಳನ್ನು ನೀ ಪಾದಕ್ಕೆ ಗಜಾನನ

ಅನುನಾಥ ನಮ್ಮ ಗಣನಾಥನ

ತಯಾಸ್ತು ತಾ. ತಾ. ಗಿಣಿತ್ತ

ತೈ ತುಂ ತಾ. ತಾ ಗಿಣಿತ್ತ

ಹುಟ್ಟಿದಾಳು ಶ್ರೀ ಗೌರಿ ಭೂಲೋಕದಲ್ಲಿ

ಅಷ್ಟಾಗಿ ಇಷ್ಟಾಗೀ ತಾನ್ ದೊಡ್ಡವಳಾಗಿ

ಹನ್ನರೆಡು ವರ್ಷಕ್ಕೆ ಋತುಮತಿಯಾಗಿ

ಲಗ್ನದ ಕಾಲಕ್ಕೆ ಬಂದವಳೇ ಮಗಳು

ಯಾರಿಗೆ ಕೊಡಲವ್ವ ಮಗಳೇ ಶ್ರೀ ಗೌರಿ

ಒಕ್ಕಲಿರಿಗೆ ಕೊಡಲಮ್ಮ ಮಗಳೇ ಶ್ರೀ ಗೌರಿ

ಒಕ್ಕಲಿಗರ ವೇದಾಂತ ಹೇಳುತ್ತೀನಿ ತಂದೆ

ಹೊಲಗದ್ದೆ ಕಳೆಯನ್ನು ನಾ ಕೀಳಲಾರೆ

ಮೂರು ಹೊತ್ತು ಅಡುಗೆಯ ನಾ ಮಾಡಲಾರೆ

ದನ ಕುರಿಗಳನ್ನು ನಾ ಕಾಯಲಾರೆ

ಯಾರಿಗೆ ಕೊಡಲವ್ವ ಮಗಳೇ ಶ್ರೀ ಗೌರಿ

ಕೊಂಕಣಿಗಾರಿಗೆ ಕೊಡಲ್ವಾ ಮಗಳೇ ಶ್ರೀ ಗೌರಿ

ಕಲ್ಲು ಬೆರೆಸಿದ ಅಕ್ಕಿಯ ನಾ ಮಾರಲಾರೆ

ಕಲ್ಲು ಬೆರೆಸಿದ ರಾಗಿಯ ನಾ ಮಾರಲಾರೆ

ಮೋಸದ ವ್ಯಾಪಾರ ನಾ ಮಾಡಲಾರೆ

ಯಾರಿಗೆ ಕೊಡಲವ್ವ ಮಗಳೇ ಶ್ರೀ ಗೌರಿ

ತಯಾಸ್ತು ತಾ. ತಾ. ಗಿಣಿತ್ತ

ತೈ ತುಂ ತಾ. ತಾ. ಗಿಣಿತ್ತ.

ಕೋಲಾಟ ಒಂದು ಜನಪದ ಕಲೆ, ಸಾಹಿತ್ಯ, ಸಂಗೀತಗಳನ್ನೊಳಗೊಂಡ ಅದು ಆಕರ್ಷಕ ಕೂಟ ನೃತ್ಯ. ಇದು ಹಳ್ಳಿಗರಿಗೆ ಸುಲಭ ಸಾಧ್ಯವೂ ವೈವಿಧ್ಯಮಯವೂ ಆದ ಒಂದು ಪ್ರಮುಖ ಮನರಂಜನೆ.

**ರಂಗದ ಕುಣಿತ**

ಹೊನ್ನಮ್ಮ, ಹುಚ್ಚಮ್ಮ ಈ ಗ್ರಾಮ ದೇವತೆಗಳ ಹಬ್ಬದ ಸಂದರ್ಭದಲ್ಲಿ ಫೆಬ್ರುವರಿ, ಮಾರ್ಚ್ ತಿಂಗಳ ನಡುವೆ 15 ದಿನಗಳ ಕಾಲ ಕಬ್ಬಳಿಯಲ್ಲಿ ರಂಗದ ಕುಣಿತವನ್ನು ಕುಣಿಯುತ್ತಾರೆ. ಗ್ರಾಮದೇವತೆಯ ಗುಡಿ ಮುಂದೆ ಒಂದು ಬಲಿಗಂಬ. ಅದಕ್ಕೆ ಮೂರು ಕವಲಿರುವ ಎರಡು ಅಡಿ ಉದ್ದದ ಒಂದು ಚಿಕ್ಕ ಆಲದ ಅಥವಾ ಅತ್ತಿಯ ಕೊನೆಯನ್ನು ತಂದು ಕಟ್ಟುತ್ತಾರೆ. ಐದು ವಿಧದ ಧಾನ್ಯವನ್ನು ಅರಿಶಿನ ಬಟ್ಟೆಯಲ್ಲಿ ಗಂಟುಗಟ್ಟಿ ಅದನ್ನೇ ಕಂಬಕ್ಕೆ ಕಟ್ಟುತ್ತಾರೆ. ಕಂಬಕ್ಕೆ ಹೂ ಮುಡಿಸುತ್ತಾರೆ. ಇದಾದ ಮೇಲೆ ಬಲಿಗಂಬದ ಸುತ್ತ ರಂಗದ ಕುಣಿತ ನಡೆಯುತ್ತದೆ. ಕುಣಿತಕ್ಕೆ ಹರಿಜನ ಮಕ್ಕಳು ತಮಟೆ ನುಡಿಸುತ್ತಾರೆ. ಮೊದಲು ಬಲಿಗಂಬಕ್ಕೆ ಪ್ರದಕ್ಷಿಣೆ ಹಾಕಿ ಅನಂತರ ಬಯಲಿಗೆ ಬಂದು ಸಾಲಾಗಿ ನಿಂತು ಕುಣಿಯುತ್ತಾರೆ. ಮೊದಲೇ ಹೇಳಿದಂತೆ ರಂಗದ ಹಬ್ಬಕ್ಕೆ ಹದಿನೈದು ದಿನ ಮುಂಚಿನಿಂದಲೂ ಈ ಕುಣಿತ ನಡೆಯುತ್ತಿರುತ್ತದೆ. ಪ್ರತಿದಿನ ರಾತ್ರಿ ಎರಡು ಮೂರು ಗಂಟೆ ಕುಣಿತ ನಡೆಯುವುದುಂಟು. ಕುಣಿಯುವಾಗ ಮಧ್ಯೆ ಮಧ್ಯೆ ಭೂಭಳರೆ ಆಹಾ! ಸಯ್ಯೋ-ಐಲ್ಲೋ್ಹಿಯಾ ಹೊಷ ಬಾ ಎಂದೆಲ್ಲಾ ಕೂಗುತ್ತಾರೆ. ಕಲಾವಿದರು ಹಾಕುವ ಹೆಜ್ಜೆಗಳ ಲೆಕ್ಕದಲ್ಲಿ ಮೂರು ಹೆಜ್ಜೆ, ಐದು ಹೆಜ್ಜೆ, ಏಳು ಹೆಜ್ಜೆ ಎಂದು  ನಾನಾವರಸೆಗಳಿವೆ. ರಂಗದ ಕಲೆಯು ಕೆಲವು ಕಡೆ ನಡೆಯುವ ಸುಗ್ಗಿಕುಣಿತವನ್ನೇ ಹೋಲುತ್ತದೆ. ಒಕ್ಕಲ ಮಕ್ಕಳಿಗೆ ಇದೊಂದು ಹಿಗ್ಗಿನ ಕುಣಿತ.

ರಂಗದ ಕುಣಿತ ಸಂದರ್ಭದಲ್ಲಿ ಗ್ರಾಮದೇವತೆಗಳನ್ನು ಹೊಗಳುವ ಹಾಡುಗಳನ್ನು ಹಾಡುತ್ತಾ ಕುಣಿಯುವುದುಂಟು.

ಹೊನ್ನಮ್ಮ ಬರುವಾಗ

ಹೊಂಬಾಳೆ ಜಲ್ಲೆಂದೂ

ಹೊಳೆಗೋಗಿ ಗುಡಿಗೆ ಬರುವಾಗ

ಐಲ್ಲೂ-ಐಲ್ಲೊ-ಹೊಯ್ಲೊ

ಯಾಕೆ ಹುಚ್ಚಮ್ಮ ಯಾಕೆ ಹುಚ್ಚಮ್ಮ

ಮುಖದಲ್ಲಿ ನಿನಕೋಪ

ಭಕ್ತಾರು ಬಂದರೆ

ನಗತೋರೆ ಹೋ ಒಹೋ ಐಲ್ಲೊ

ಎಂದು ಹಾಡಿ ಕುಣಿಯುತ್ತಾರೆ. ಹಾಡಿಗೆ ಅನುಗುಣವಾಗಿ ಲಯ ಪ್ರಧಾನವಾಗಿ ತಮಟೆ ನುಡಿಸಲಾಗುತ್ತದೆ.

## ಗ್ರಾಮೀಣ ಕ್ರೀಡೆಗಳು

ಇಂದಿನ ಆಧುನಿಕ ಜಗತ್ತು ವೈಜ್ಞಾನಿಕತೆಯತ್ತ ದಾಪುಗಾಲು ಇಡುತ್ತಲೆ ಸಾಗುತ್ತಿದೆ. ನಮ್ಮ ಹಳೆಯ ಸಂಪ್ರದಾಯಗಳು ನೆಲ ಮತ್ತು ಜಲ ಸಂಸ್ಕೃತಿಗಳು ತಂತ್ರಜ್ಞಾನ ಮತ್ತು ಆಧುನಿಕತೆಯ ನಡುವೆ ಸಿಕ್ಕಿ ನರಳುತ್ತಿವೆ.

ಹಾಗೆಯೇ ಕ್ರೀಡೆಯ ವಿಚಾರಕ್ಕೆ ಬಂದಾಗ ಗ್ರಾಮೀಣ ಕ್ರೀಡೆಗಳು ನಶಿಸಿಹೋಗುತ್ತಿವೆ ಎಂಬ ಸಂಗತಿ ಈಗ ಎಲ್ಲ ಕಡೆಯು ಗೊತ್ತಿರುವ ವಿಷಯ. ಅದಕ್ಕೆ ಹಲವು ಕಾರಣಗಳಿವೆ.

ಕಬ್ಬಳಿ ಗ್ರಾಮಕ್ಕೆ ಮೊದಲು ಬೇಟಿಯಿತ್ತ ದಿನ ಪ್ರಶ್ನೆ ಹಾಕಿದ್ದು ಗ್ರಾಮೀಣ ಕ್ರೀಡೆಗಳನ್ನು ಕುರಿತು. ಈ ಊರಿನ 75 ವರ್ಷದ ಬಸವೇಗೌಡರು ಹಲವು ಗ್ರಾಮೀಣ ಕ್ರೀಡೆಯ ಹೆಸರನ್ನು ಹೇಳಿದರು. ಅಂತೆಯೇ ಅವುಗಳು ಈಗ ಅಷ್ಟು ಚಾಲ್ತಿಯಲ್ಲಿಲ್ಲ. ಕಾರಣ ಟಿ.ವಿ.ಮಾಧ್ಯಮ ಎಂದರು.

ಆದರೂ ಕಬ್ಬಳಿ ಗ್ರಾಮದಲ್ಲಿ ಅಳಿದುಳಿದ ಗ್ರಾಮೀಣ ಕ್ರೀಡೆಗಳ ವಿಶೇಷದ ಬಗ್ಗೆ ಚರ್ಚಿಸಲೇಬೇಕು. ಯಾಕೆಂದರೆ ಗ್ರಾಮೀಣ ಕ್ರೀಡೆಗಳು ನಮ್ಮ ಸಂಸ್ಕೃತಿಯ ಅಂಗ. ಜನಪದ ಕ್ರೀಡೆಗಳ ಮುಖ್ಯ ಉದ್ದೇಶ ಮನರಂಜನೆ. ದುಡಿಮೆಯ ಕಾಲದಲ್ಲಿ ಕಾಯಕಗಳಲ್ಲಿ ನಿರತರಾಗಿದ್ದ ನಮ್ಮ ಜನಪದರು ಬಿಡುವಿನ ಕಾಲದಲ್ಲಿ ಕಥೆ, ಒಗಟು,ಇತ್ಯಾದಿ ಮಾನಸಿಕ ಚಟುವಟಿಕೆಯ ಮುಖೇನ ಮನರಂಜನೆ ಪಡೆದುಕೊಂಡತೆಯೇ ದೇಹಶ್ರಮಯುಕ್ತವಾದ ಆಟವಾಡಿಯೂ ಆನಂದ ಪಡೆಯುತ್ತಿದ್ದರು. ಆಟ ಪರೋಕ್ಷವಾಗಿ ಬದುಕಿನ ಹಲವು ಸಂಗತಿಗಳ ಪಾಠ ಕಲಿಸುತ್ತದೆ. ಬಿಡುವಿನ ವೇಳೆಯಲ್ಲಿ, ಹಬ್ಬ ಹರಿದಿನಗಳಲ್ಲಿ ಜನಪದರು ಆಡುತ್ತಿದ್ದ ಕ್ರೀಡೆಗಳಿಗೆ ಹೊರನೋಟಕ್ಕೆ ಒಂದು ಧಾರ್ಮಿಕ ಸ್ಪರ್ಶ ಇರುವಂತೆ ಭಾಸವಾದರೂ ಅವುಗಳ ಮುಖ್ಯ ಉದ್ದೇಶ ವಿನೋದ,ಮನರಂಜನೆ. ಈ ಕ್ರೀಡೆಗಳಿಗೆ ಉತ್ಸವದ ಮಹತ್ವ ಬರಲು ಕಾರಣ ಸ್ನೇಹ, ಸೌಹಾರ್ದತೆ,ಸಾಹಸ, ಸ್ಪರ್ಧಾಭಾವ, ಇತ್ಯಾದಿ, ಗುಣಗಳನ್ನು ಉಳಿಸಿಕೊಳ್ಳುವ, ಬೆಳಸಿಕೊಳ್ಳುವ ಆಸೆ ಜನಪದ ಕ್ರೀಡೆಗಳಲ್ಲಿ ಇರುವುದು. ಇಬ್ಬರ ನಡುವೆ ನಡೆಯುವ ಸ್ಪರ್ಧಾತ್ಮಕ ಆಟಗಳಿಂದ ಹಿಡಿದು ಇಡೀ ಸಮುದಾಯವೇ ಭಾಗಿಯಾಗುವ ವ್ಯಾಪ್ತಿಯವರೆಗಿನ ವೈವಿಧ್ಯಮಯ ಕ್ರೀಡೆಗಳಿವೆ.

ಮುಖ್ಯವಾಗಿ ಕಬ್ಬಳಿ ಗ್ರಾಮದಲ್ಲಿ ಕಂಡು ಬರುವ ಗ್ರಾಮೀಣ ಕ್ರೀಡೆಗಳು ಎಂದರೆ ಲಗೋರಿ ಆಟ, ಅಳುಗುಳಿ ಮನೆಂಆಟ, ಚೌಕಾಬಾರ, ಚಿಣ್ಣಿದಾಂಡು, ಸಾಣೇಕಲ್ಲು,ಮರಕೋತಿಯಾಟ, ಕೋಳಿಕಾಳಗ,ಕಬಡ್ಡಿ, ಇತ್ಯಾದಿ ಇವುಗಳನ್ನು ಕೆಳಗಿನಂತೆ ವಿಶ್ಲೇಷಿಸಿ ನೋಡಬಹುದಾಗಿದೆ.

## ಲಗೋರಿ ಆಟ

ಈ ಆಟದಲ್ಲಿ ಸುಮಾರು ಐದರಿಂದ ಹತ್ತು ಜನರುಗಳ ಗುಂಪು ಇರುತ್ತದೆ. ಆಟಕ್ಕೆ ಬೇಕಾಗಿರುವ ಸಾಮಗ್ರಿ ಎಂದರೆ ಒಂದು ಚೆಂಡು. ನಾಲ್ಕೈದು ತೆಳುವಾಗಿರುವ ಕಲ್ಲುಗಳು. ಮೊದಲು ನಾಲ್ಕೈದು ಕಲ್ಲುಗಳನ್ನು ಒಂದರ ಮೇಲೊಂದು ಜೋಡಿಸಲಾಗುತ್ತದೆ ಮತ್ತು ಮೊದಲೆ ಆಯ್ಕೆ ಮಾಡಿದ ವ್ಯಕ್ತಿ ಆ ಜೋಡಿ ಅಟ್ಟೆಗೆ ಚೆಂಡಿನಿಂದ ಗುರಿಯಿಟ್ಟು ಹೊಡೆಯುತ್ತಾನೆ. ಹೊಡೆಯುತ್ತಿದ್ದಂತೆ ಚೆಂಡನ್ನು ಯಾರು ಮೊದಲು ಹಿಡಿದುಕೊಂಡು ಬೇರೆಯವರಿಗೆ ಚೆಂಡಿನಿಂದ ಹೊಡೆಯುತ್ತಾನೋ ಅವನು ಗೆದ್ದಂತೆ. ಹೊಡೆಸಿಕೊಂಡವನು ಕುದುರೆಯಾಗಬೇಕಾಗುತ್ತದೆ. ಆದರೆ ಚಂಡಿನಿಂದ ತಪ್ಪಿಸಿಕೊಂಡು ಬಂದು ಆ ಕಲ್ಲುಗಳನ್ನು ಜೋಡಿಸುವಾಗ ಆಟಗಾರ ಮತ್ತೊಮ್ಮೆ ನಡೆಯುವ ಈ ಆಟದಲ್ಲಿ ಜೋಡಿಸಿದ ಅಟ್ಟೆ ಕಲ್ಲಿಗೆ ಹೊಡೆಯುವ ನಾಯಕನಾಗುತ್ತಾನೆ.

ಹೀಗೆ ಈ ಆಟದಲ್ಲಿ ಸೋತ ವ್ಯಕ್ತಿ ಬೇರೆಯವರನ್ನು ತನ್ನ ಬೆನ್ನ ಮೇಲೆ ಕೂರಿಸಿಕೊಳ್ಳಬೇಕಾಗುತ್ತದೆ. ಸವಾರಿ ಮಾಡಿದ ವ್ಯಕ್ತಿ ಗುರಿಯಿಟ್ಟು ಅಟ್ಟೆ ಕಲ್ಲಿಗೆ ಹೊಡೆದಾಗ ಕುದುರೆಯಾಗಿದ್ದ ವ್ಯಕ್ತಿ ಆ ಚೆಂಡನ್ನು ಹಿಡಿದರೆ ಅವನ ಆಟ ಮುಗಿದಂತೆ. ಇದೇ ರೀತಿ ಪುನಾರಾವರ್ತನೆಯಾಗುವ ಈ ಆಟ ಸಾಮಾನ್ಯವಾಗಿ ಹಾಸನ ಜಿಲ್ಲೆಯಾದ್ಯಂತ ಕಂಡು ಬರುವ ಗ್ರಾಮೀಣ ಕ್ರೀಡೆಯಾಗಿದೆ.

## ಅಳುಗುಳಿ ಮನೆಯಾಟ

ಈ ಆಟವು ಕಬ್ಬಳಿಯಲ್ಲಿ ಸಾಮಾನ್ಯವಾಗಿ ಕಂಡು ಬರುತ್ತದೆ. ಈ ಆಟಕ್ಕೆ ಬಳಕೆಯಾಗುವ ಆಟದ ಸಾಮಗ್ರಿಯೆಂದರೆ ಮರದಿಂದ ಮಾಡಿರುವ ಎರಡು ಸಾಲಿನಲ್ಲಿ ಎಂಟುಗುಳಿ ತೋಡಿರುವ ಹಲಗೆ ಆಟಕ್ಕೆ ಹುಣಸೆಬೀಜ ಅಥವಾ ಸಣ್ಣಕಲ್ಲುಗಳು ಮಾತ್ರ ಸಾಕು. ಈ ಆಟಕ್ಕೆ ಇಬ್ಬರು ಆಟಗಾರರು ಮಾತ್ರ ಸಾಕು. ಎದುರ ಬದಿರು ಕೂರುವ ಇಬ್ಬರು ಆಟಗಾರರು ತಮ್ಮ ಬಳಿ ಇರುವ ಹುಣಸೆಬೀಜದ ಕಾಯಿಗಳನ್ನು ತಲಾ ಒಂದರಂತೆ ಎಲ್ಲಾ ಗುಳಿಮನೆಗೂ ಹಾಕುತ್ತಾರೆ.

ಕೊನೆಗೆ ಕಾಯಿ ಮುಗಿದಾಗ ಒಂದು ಮನೆ ಖಾಲಿಯಿದ್ದು ಮುಂದಿನ ಮನೆಯಲ್ಲಿ ಕಾಯಿಗಳಿದ್ದರೆ ಖಾಲಿ ಇದ್ದ ಮನೆಯನ್ನು ಒರೆಸಿ ಮುಂದಿನ ಮನೆಯಲ್ಲಿದ್ದ ಕಾಯಿಗಳನ್ನು ಗೆದ್ದುಕೊಳ್ಳುತ್ತಾನೆ. ಹಾಗೆ ಒಂದೊಂದೆ ಕಾಯಿ ಹಾಕಿಕೊಂಡು ಬರುವಾಗ ಯಾವ ಮನೆಯಲ್ಲಿ ಆರುಕಾಯಿಗಳಾಗುತ್ತವೊ ಅದನ್ನು ಮೊದಲು ಗಮನಿಸಿದ ವ್ಯಕ್ತಿ ಮನೆ ತುಂಬಿತೆಂದು ಎತ್ತಿಕೊಳ್ಳುತ್ತಾನೆ. ಇದೇ ರೀತಿ ಯಾರು ಹೆಚ್ಚು ಕಾಯಿ ಗೆಲ್ಲುತ್ತಾರೋ ಅವರೆ ಗೆದ್ದರೆಂದು ತೀರ್ಮಾನವಾಗುತ್ತದೆ.

## ಚೌಕಾಬಾರ

ಈ ಆಟವು ಕಬ್ಬಳಿಯಲ್ಲಿ ಹಬ್ಬ ಹರಿದಿನಗಳಲ್ಲಿ ತುಂಬಾ ಪ್ರಸಿದ್ಧಿ ಪಡೆದುದು. ಯುಗಾದಿ, ದೀಪಾವಳಿ, ಶಿವರಾತ್ರಿಗಳಂದು ಈ ಆಟ ಆಡಲು ಎಲ್ಲರೂ ಮನೆಯ ಜಗಲಿ ಮೇಲೆ ಗುಂಪು-ಗುಂಪಾಗಿ ಕುಳಿತು ಆಡುತ್ತಾರೆ. ಈ ಆಟವನ್ನು ಕೇವಲ ಮನರಂಜನೆಗೆ ಆಡುವವರಿದ್ದರೆ ಮತ್ತೆ ಕೆಲವರು ತಮ್ಮ ಶಕ್ತಿಗೆ ಅನುಸಾರವಾಗಿ ಹಣ ಹೂಡಿಕೊಂಡು ಆಡುತ್ತಾರೆ.

ಈ ಆಟವಾಡುವುದರಿಂದ ಮಳೆ ಬರುತ್ತದೆ ಎಂಬ ನಂಬಿಕೆ ಕೆಲವು ಊರುಗಳಲ್ಲಿದೆ. ಈ ಬಗ್ಗೆ ಕಬ್ಬಳಿ ಜನರನ್ನು ಕೇಳಿದಾಗ ಅಂತಹ ನಂಬಿಕೆಯೇನೂ ನಮ್ಮ ಊರಿನಲ್ಲಿ ಇಲ್ಲ ಎಂದು ತಿಳಿಸಿದರು. ಈ ಆಟದಲ್ಲಿ ಐದು ಮನೆಯಾಟ, ಏಳು ಮನೆಯಾಟ ಎಂಬ ಮೂರು-ನಾಲ್ಕು ರೀತಿಯ ಆಟಗಳಿವೆ. ಇದರಲ್ಲಿ ಹೆಚ್ಚಾಗಿ ಆಡುವುದು ಐದು ಮನೆಯ ಆಟವನ್ನು. ಈ ಆಟಕ್ಕೆ ಮುಖ್ಯವಾಗಿ ಒಂದು ಕಡೆ ಮಸೆದ ಹುಣಸೆ ಬೀಜಗಳನ್ನು ದಾಳವಾಗಿ ಬಳಸುತ್ತಾರೆ. ದೇವರಿಗೆ ಬಿಡುವುದು, ಕಾಯಿ ಹೊಡೆಯುವುದು, ಹಣ್ಣು ಮಾಡುವುದು, ಇತ್ಯಾದಿ, ಅಂಶಗಳು ಆಟದಲ್ಲಿರುತ್ತದೆ. ಈ ಆಟ ಕೇವಲ ಮನೋರಂಜನೆಗಾಗಿ ಮಾತ್ರ, ಆದರೆ ಕೆಲವೊಮ್ಮೆ ಈ ಆಟವು ಜೂಜಾಗಿ ಬಳಕೆಯಾಗುತ್ತದೆ.

## ಚಿಣ್ಣಿದಾಂಡು

ಕಬ್ಬಳಿಯಲ್ಲಿ ಈ ಆಟಕ್ಕೆ ಚಿಣ್ಣಿದಾಂಡು ಮತ್ತು "ಇಳ್ಳೇಕೋಲು" ಎಂದು ಎರಡು ರೀತಿಯಲ್ಲಿ ಕರೆಯಲಾಗುತ್ತದೆ. ಕಬ್ಬಳಿ ಗ್ರಾಮದಲ್ಲಿ ಈ ಆಟ ಈಗ ನಶಿಸುವ ಹಂತದಲ್ಲಿದೆ. ಕಾರಣ ಕ್ರಿಕೆಟ್‌ನ ಮಹಿಮೆ. ಈ ಆಟಕ್ಕೆ ಎರಡರಿಂದ ನಾಲ್ಕು ಜನ ಆಟಗಾರರು ಬೇಕು. ಆಟಕ್ಕೆ ಬೇಕಾದ ವಸ್ತು ಎಂದರೆ ಒಂದು ಮೊಳ ಇರುವ ಹಾಗೂ ಚೋಟುದ್ದ ಇರುವ ಎರಡು ಸಣ್ಣ ಕೋಲು. ಇದರಲ್ಲಿ ಮೊದಲನೆಯದಕ್ಕೆ "ದಾಂಡು" ಎಂದರೆ, ಎರಡನೆಯದನ್ನು "ಚಿಣ್ಣಿ" ಎಂದು ಕರೆಯಲಾಗುತ್ತದೆ.

ಈ ಆಟಕ್ಕೆ ಒಂದು ಸಣ್ಣ ಗುಂಡಿಯನ್ನು ತೋಡಲಾಗುತ್ತದೆ. ಅದರ ಮೇಲೆ ಮೊದಲು ಆಟ ಪ್ರಾರಂಭಿಸುವವನು ಚಿಣ್ಣಿಯನ್ನು ಇಟ್ಟು ದಾಂಡಿನಿಂದ ಚಿಮ್ಮುತ್ತಾನೆ. ಚಿಮ್ಮುವ ಮೊದಲು "ರಡೆ-ವಡೆ" ಎಂಬ ಸಂಕೇತ ಬಳಸಲಾಗುತ್ತದೆ. ದಾಂಡಿನಿಂದ ಚಿಮ್ಮುವ ಚಿಣ್ಣಿಯನ್ನು ನೆಲಕ್ಕೆ ಬೀಳದಂತೆ ಹಸ್ತಗಳಲ್ಲಿ ಆತು ಹಿಡಿದುಕೊಂಡರೆ ಚಿಮ್ಮಿದಾತ ಸೋತು ನಿರ್ಗಮಿಸಿ ಮತ್ತೊಬ್ಬ ಆಡುತ್ತಾನೆ. ಬಿಟ್ಟರೆ ಚಿಮ್ಮಿದಾತ ದಾಂಡನ್ನೆ ಆ ಪುಟ್ಟ ಗುಂಡಿಯ ಮೇಲೆ ಅಡ್ಡಲಾಗಿ ಇಡುತ್ತಾನೆ. ಚಿಣ್ಣಿಯನ್ನು ಎತ್ತಿಕೊಂಡ ಉಳಿದವರಲ್ಲಿ ಒಬ್ಬನು ಆ ದಾಂಡಿಗೆ ಹೊಡೆದರೆ ಚಿಮ್ಮಿದಾತ ಸೋತಂತೆ. ಆಗ ಬೇರೊಬ್ಬ ಆಡಬೇಕಾಗುತ್ತದೆ. ಅದೇನಾದರೂ ದಾಂಡನ್ನು ಸ್ಪರ್ಶಿಸದಿದ್ದರೆ ಚಿಮ್ಮಿದಾತ ಆಟ ಮುಂದುವರಿಸುತ್ತಾನೆ. ದಾಂಡಿನಿಂದ ಚಿಣ್ಣಿಯ ತುದಿಗೆ ಹೊಡೆಯುವ ಮೂಲಕ ಅದನ್ನು ಗಾಳಿಯಲ್ಲಿ ಹೊಡೆಯುತ್ತಾನೆ. ಆಗ ಅದು ಎಷ್ಟು ದೂರ ಹೋಗುತ್ತೋ ಅಷ್ಟು ದೂರದಿಂದ 20,30,40 ಎಂಬ ಇತ್ಯಾದಿ ರನ್‌ಗಳನ್ನು ಹೊಡೆದಾತ ಹೇಳುತ್ತಾನೆ. ರನ್‌ಗಳನ್ನು ಲೆಕ್ಕ ಹಾಕಲಾಗುತ್ತದೆ. ಹೊಡೆದಾತ ರನ್‌ಗಳನ್ನು ಹೆಚ್ಚು ಹೇಳಿದರೆ ಅವನು ಸೋತಂತೆ. ಒಂದು ವೇಳೆ ರನ್‌ಗಳನ್ನು ಕಡಿಮೆ ಹೇಳಿದರೆ ಅವನು ಆಟ ಮುಂದುವರೆಸಬಹುದು. ಆದರೆ ರನ್‌ಗಳನ್ನು ಹೆಚ್ಚು

ಹೇಳುವಂತಿಲ್ಲ. ಈ ರೀತಿ ಆಡುವ ಈ ಆಟ ಹೆಚ್ಚು ಮನರಂಜನೆ ನೀಡುವುದರ ಜೊತೆಗೆ ಸೂಕ್ಷ್ಮವಾಗಿ ಬುದ್ಧಿ ಜಾಗೃತಿಗೆ ಅನುಕೂಲಕರ ಆಟವೆಂದು ಹೇಳಬಹುದು.

**ಮರಕೋತಿಯಾಟ**

ಕಬ್ಬಳಿಯಲ್ಲಿ ಕಂಡು ಬರುವಂತಹ ಜನಪದ ಕ್ರೀಡೆಗಳಲ್ಲಿ ಮರಕೋತಿಯಾಟವು ಒಂದು ಜಾನಪದೀಯ ಆಟವಾಗಿದೆ. ಈ ಆಟವನ್ನು ಆಡುವುದು ಸಾಮಾನ್ಯವಾಗಿ ಬೇಸಿಗೆಯ ಕಾಲದಲ್ಲಿ. ಆ ಸಮಯದಲ್ಲಿ ಎಲ್ಲಾ ಕೆಲಸಗಳು ಮುಗಿದಿರುತ್ತವೆ ಮತ್ತು ಎಲ್ಲಾ ಹುಡುಗರಿಗೆ ಪರೀಕ್ಷೆಗಳು ಮುಗಿದಿದ್ದು ಎಲ್ಲರೂ ಕೆರೆ ಹೊಲಗಳಿಗೆ ಎಮ್ಮೆ, ಕುರಿ ಮೇಯಿಸಲು ಹೋದಂತಹ ಸಂದರ್ಭದಲ್ಲಿ ಈ ಆಟವನ್ನು ಆಡಲಾಗುತ್ತದೆ. ಈ ಆಟವನ್ನು ಆಡಲು ಇಷ್ಟೆ ಜನರು ಬೇಕೆಂದೇನೂ ಇರುವುದಿಲ್ಲ. ಎಷ್ಟು ಜನರು ಬೇಕಾದರೂ ಆಡಬಹುದಾಗಿದೆ.

ಈ ಆಟವನ್ನು ಆಡಲು ಹೆಸರೇ ಸೂಚಿಸುವಂತೆ ಮರ ಬೇಕಾಗುತ್ತದೆ ಮತ್ತು ಎರಡು ಅಡಿ ಉದ್ದದ ಕೋಲು ಬೇಕಾಗುತ್ತದೆ. ಆಟವನ್ನು ಆಡುವವರ ಗುಂಪಿನಲ್ಲಿ ಒಬ್ಬನನ್ನು ಕಳ್ಳನಂತೆ ಮಾಡಿ ಮತ್ತೊಬ್ಬನು ಮರದ ಕೆಳಗೆ ನಿಂತು ಕೋಲನ್ನು ಎಸೆಯುತ್ತಾನೆ. ಅವನು ಕೋಲು ತರುವಷ್ಟರಲ್ಲಿ ಅವನು ಮರ ಏರಿ ಕುಳಿತುಕೊಳ್ಳುತ್ತಾನೆ. ಕಳ್ಳ ಆದವನು ಏರಿ ಬೇಕಾದರು ಮತ್ತೊಬ್ಬನನ್ನು ಕಳ್ಳನಂತೆ ಮಾಡಬಹುದು. ಏರದೇ ಬೇಕಾದರೂ ಮಾಡಬಹುದು. ಇತ್ತೀಚಿನ ದಿನಗಳಲ್ಲಿ ಈ ಆಟವು ಕೂಡ ಅವಸಾನದ ಅಂಚಿನಲ್ಲಿದೆ ಎನ್ನುತ್ತಾರೆ. ಮಾಹಿತಿದಾರರು ಹೇಳುವಂತೆ ನಾವು ಕೆರೆಗೆ ಎಮ್ಮೆ, ದನಗಳನ್ನು ಮೇಯಿಸಲು ಹೋಗುತ್ತಿದ್ದಂತಹ ಸಂದರ್ಭದಲ್ಲಿ ಕೆರೆಯ ಏರಿ ಮೇಲೆ ಬೇಕಾದಷ್ಟು ಮರಗಳಿದ್ದವು. ಆದರೆ ಈಗ ನೋಡಲು ಒಂದು ಮರವು ಕಾಣುತ್ತಿಲ್ಲ. ನಮ್ಮ ಆಟಗಳು ನಮ್ಮ ಕಾಲಕ್ಕೆ ನಿಂತುಹೋದ್ದೋ. ಇತ್ತೀಚಿನ ಹುಡುಗರು ಅವರಿಗೆ ಸರಿಹೊಂದೋ ಆಟವಾಡುತ್ತಾರೆ ಎಂದು ಹೇಳುತ್ತಾರೆ.

## ಕೋಳಿ ಕಾಳಗ

ಈ ಕೋಳಿ ಕಾಳಗ ಬಹು ಹಿಂದೆ ಇದ್ದಂತಹ ಕಬ್ಬಳಿ ಗ್ರಾಮದ ಜನಪದ ಕ್ರೀಡೆಯಾಗಿದ್ದು, ಇದು ಎರಡು ಹುಂಜಗಳ ನಡುವೆ ನಡೆಯುವಂತಹ ಒಂದು ಸ್ಪರ್ಧೆಯಾಗಿರುತ್ತದೆ. ಈ ಕಾಳಗವನ್ನು ಸುಗ್ಗಿಯ ಕಾಲವು ಮುಗಿದ ಮೇಲೆ ಕೋಳಿಕಾಳಗವನ್ನು ಆಡಿಸುತ್ತಾರೆ.

ಈ ಕೋಳಿಕಾಳಗವನ್ನು ಭತ್ತ ಕೊಯ್ದು ಗದ್ದೆ ಬಯಲಿನಲ್ಲಿ ಆಟವನ್ನು ಆಡಿಸಲಾಗುತ್ತದೆ. ಈ ಆಟಕ್ಕೆ ಬಳಸುವ ಹುಂಜಗಳು ಹಲವಾರು ಜಾತಿಗಳಾಗಿರುತ್ತವೆ. ಈ ಹುಂಜಗಳಿಗೆ ನಾನಾ ತರಹದ ಹೆಸರುಗಳನ್ನು ಇಟ್ಟಿರುತ್ತಾರೆ.

ಈ ಕೋಳಿಕಾಳಗಕ್ಕೆ ಎರಡು ಸಮಗಾತ್ರದ ಹುಂಜಗಳನ್ನು ಬಿಡುತ್ತಾರೆ. ಈ ಕಾಳಗಕ್ಕೆ ಬಿಟ್ಟ ಹುಂಜಗಳು ಕೊಕ್ಕಿನಿಂದ ಒಂದರ ತಲೆಯನ್ನು ಇನ್ನೊಂದು ಕುಕ್ಕುವುದಕ್ಕೆ ಹವಣಿಸುತ್ತಿರುತ್ತವೆ. ಈ ಕಾಳಗ ನಡೆಯುವಾಗ ಹುಂಜವು ಕಣದಿಂದ ಹೊರಕ್ಕೆ ಓಡಿಹೋದರೆ ಓಡಿಹೋದ ಹುಂಜವು ಸೋತಂತೆಯೇ ಲೆಕ್ಕವಾಗುತ್ತದೆ. ಕೆಲವು ಹುಂಜಗಳು ಮತ್ತೆ ಬಂದು ಕಾಳಗಕ್ಕೆ ನಿಲ್ಲುತ್ತವೆ. ಈ ಹುಂಜಗಳಿಗೆ ಸಾಮಾನ್ಯವಾಗಿ ಬಲಗಾಲಿನ ಹೆಬ್ಬರಳಿಗೆ ಕತ್ತಿಯನ್ನು ಕಟ್ಟಿರುತ್ತಾರೆ. ಇದರಿಂದ ಎದುರಾಳಿ ಹುಂಜವನ್ನು ಸುಲಭವಾಗಿ ಸೋಲಿಸಬಹುದು ಎಂಬುದು ಮಾಹಿತಿದಾರನ ಅಭಿಪ್ರಾಯವಾಗಿದೆ. ಈ ಕೋಳಿ ಅಂಕದಲ್ಲಿ ಪ್ರಮುಖವಾಗಿ ಎರಡು ವಿಧಗಳು ಇವೆಯಂತೆ. ಅವು "ಸಮ" ಮತ್ತು "ಓಡಿ" ಸಮ ಅಂದರೆ ಎರಡು ಕೋಳಿಗಳಲ್ಲಿ ಯಾವುದಾದರೊಂದು ಸತ್ತರೆ ಗೆದ್ದ ಕೋಳಿಯವನಿಗೆ ಸೇರುತ್ತದೆಯಂತೆ. "ಓಡಿ" ಎಂದರೆ ಎದುರಾಳಿ ಓಡಿ ಹೋದರೆ ಗೆದ್ದ ಕೋಳಿಯವನಿಗೆ ದಕ್ಕುತ್ತದೆಯಂತೆ ಮತ್ತು ಗೆದ್ದ ಕೋಳಿಗಳಿಗೆ ಬಹುಮಾನಗಳನ್ನು ಕೊಡುತ್ತಾರಂತೆ.

## ಸಾಣಿಕಲ್ಲು (ಅಣ್ಣೆಕಲ್ಲು)

ಈಗಿನ ದಿನಗಳಲ್ಲಿ ಹಳಿದು ಹೋಗುತ್ತಿರುವ ಆಟವೆಂದರೆ ಸಾಣಿಕಲ್ಲು. ರೈತಮಕ್ಕಳು, ದನಗಾಹಿಗಳು ಈ ಆಟವನ್ನೆ ಹೆಚ್ಚಾಗಿ ಆಡುತ್ತಾರೆ. ಈ ಆಟ ಆಡಲು ಕನಿಷ್ಠ ಇಬ್ಬರು ಆಟಗಾರರಿಬೇಕು. ಈ ಆಟಕ್ಕೆ ಬೇಕಾದ ಮುಖ್ಯ ಸಾಮಾಗ್ರಿಯೆಂದರೆ ನುಣುಪಾದ ಹತ್ತು ಕಲ್ಲುಗಳು. ಈ ಆಟದಲ್ಲಿ ಐದು ಕಲ್ಲಿನ ಜೋಡಿಯಾಟ, ಹನ್ನೆರಡು ಕಲ್ಲಿನ ಆಟ ಎಂಬ ಅನೇಕ ವಿಧಗಳಿವೆ. ಇದು ತಮ್ಮ ಮನಸ್ಸಿನ ಬೇಸರ ಕಳೆಯಲು ಆಡುವ ಒಂದು ರೀತಿಯ ಮನರಂಜನೆಯ ಆಟ ಎಂದರೆ ತಪ್ಪಾಗಲಾರದು.

ಈ ಆಟದಲ್ಲಿ ಕಲ್ಲನ್ನು ಮೊದಲು ನೆಲದ ಮೇಲೆ ಬಿಡಿಸಲಾಗುತ್ತದೆ. ಒಂದು ಕಲ್ಲನ್ನು ಎತ್ತಿಕೊಂಡು ಉಳಿದ ಕಲ್ಲುಗಳನ್ನು ಮೊದಲು ಎತ್ತಿಕೊಂಡ ಕಲ್ಲನ್ನು ಮೇಲೆ ಚಿಮ್ಮುವ ಮೂಲಕ ಎತ್ತಿಕೊಂಡು ಚಿಮ್ಮಿದ ಕಲ್ಲನ್ನು ಕೈಯಲ್ಲಿ ಹಿಡಿಯುವುದರ ಮೂಲಕ ಗೆಲ್ಲಬೇಕಾಗುತ್ತದೆ. ಈ ರೀತಿ ಆಡುವಾಗ ಒಂದು ಕಲ್ಲನ್ನು ಮಾತ್ರ ಗೆಲ್ಲಬೇಕು. ಉಳಿದ ಕಲ್ಲಿಗೆ ಸ್ಪರ್ಶಿಸಿದರೆ ಸೋತರೆಂದು ಲೆಕ್ಕ. ಇದೇ ರೀತಿ ಮೊದಲು ಒಂದು ಕಲ್ಲು ಅನಂತರ ಎರಡು ಮೂರು ನಾಲ್ಕು ಹೀಗೆ ಗುಚ್ಚಗುಚ್ಚವಾಗಿ ಕಲ್ಲನ್ನು ಒಂದೇ ಕೈಯಲ್ಲಿ ಬಾಚಿಕೊಳ್ಳಬೇಕಾಗುತ್ತದೆ. ಹೀಗೆ ಸಂಪೂರ್ಣವಾಗಿ ಎಲ್ಲ ವಿಭಾಗದಲ್ಲೂ ಗೆಲ್ಲುವವರು ಉಳಿದ ಆಟಗಾರರಿಗೆ ಸಾಣಿ ಹೊರಿಸುತ್ತಾರೆ. ಸಾಮಾನ್ಯವಾಗಿ ಈ ಆಟದಲ್ಲಿ ಹೆಚ್ಚಾಗಿ ಭಾಗವಹಿಸುವವರು ಹುಡುಗಿಯರು ಎಂದು ಹೇಳಬಹುದು.

ಹೀಗೆ ಮೇಲಿನ ಗ್ರಾಮೀಣ ಕ್ರೀಡೆಗಳನ್ನು ಕಬ್ಬಳಿ ಸಾಂಸ್ಕೃತಿಕ ಜೀವನದಲ್ಲಿ ಗಮನಿಸಿ ನೋಡಬಹುದಾಗಿದೆ. ಒಟ್ಟಾರೆ ಹೇಳುವುದಾದರೆ ಜೀವನ ನಿಂತ ನೀರಲ್ಲ ನಿರಂತರ ಹರಿಯುವ ನದಿ, ಪ್ರದೇಶ ಪರಿಸ್ಥಿತಿಗೆ ಅನುಸಾರವಾಗಿ ನೀರು ಪಾತ್ರ ರಚಿಸಿಕೊಂಡು ಸಾಗುವಂತೆ ಬದುಕಿನ ವಾಹಿನಿಯ ಪ್ರಭಾವ ಪರಿಸ್ಥಿತಿಗನುಗುಣವಾಗಿ ಜೀವನ ಧರ್ಮವನ್ನು

ಅಳವಡಿಸಿಕೊಂಡು ಸಾಗಬೇಕು. ಹೀಗೆ ಸಾಗುವಾಗ ಪರಂಪರೆ ಪ್ರಗತಿಗಳ ಘರ್ಷಣೆ ಸಹಜ ಒಂದು ಕಡೆ ಪರಂಪರೆಯ ಮೂಲ ಸೂತ್ರವಾಗಿ ಹರಿದು ಬರುತ್ತಿರುವ ಜನಪದ ಸಂಸ್ಕೃತಿ ಮತ್ತೊಂದು ಕಡೆ ಪ್ರಗತಿಯ ಹೆಸರಿನಲ್ಲಿ ಆಕ್ರಮಿಸುತ್ತಿರುವ ಯಂತ್ರ ನಾಗರೀಕತೆ ಮತ್ತು ಆಧುನಿಕ ಶಿಕ್ಷಣ ಇವುಗಳ ನಡುವೆ ಪ್ರಸ್ತುತ ಬದುಕು ಗಾಸಿಗೆ ಗುರಿಯಾಗಿದೆ. ಪರಂಪರೆ ಎಂದಾಕ್ಷಣ ಭಾವುಕವಾಗಿ ಅಲ್ಲಿರುವುದೆಲ್ಲ ಮುತ್ತು, ಮಾಣಿಕ್ಯ, ರತ್ನ ಎಂದು ಕಣ್ಮುಚ್ಚಿ ಸ್ವೀಕರಿಸುವುದು ಎಷ್ಟು ಕೆಟ್ಟದೋ ಪರಂಪರೆ ಎಂದರೆ ಮೂಢನಂಬಿಕೆ ಕಂದಾಚಾರಗಳ ಆಗರ ಎಂದು ಸಾರಸಗಟು ತಿರಸ್ಕರಿಸುವುದೂ ಅಷ್ಟೆ ಅಪಾಯಕಾರಿ.

ಪ್ರೌಢ ಸಾಹಿತ್ಯವು ಮೃತಪ್ರಾಯವಾದಾಗ ಜನಪಮದರ ಸಾಹಿತ್ಯ ಅದಕ್ಕೆ ಹೊಸ ಶೈಲಿಯಲ್ಲಿ ಹೊಸತತ್ವವನ್ನು ಒದಗಿಸಿ ಅದನ್ನು ನವೀಕರಿಸುತ್ತದೆ. ಎಂಬ ಹರ್ಡರ್ ಅವರ ಹೇಳಿಕೆಯಲ್ಲಿ ಪರಂಪರೆ ಪ್ರಗತಿಗಳ ನಡುವಿನ ರಕ್ತ ಸಂಭಂದ ವ್ಯಕ್ತವಾಗುತ್ತದೆ. ಮಾನವನ ಬದುಕು ಸ್ವಾರ್ಥ ಸಣ್ಣತನ ಅಮಾನವೀಯತೆಗಳ ಯಾಂತ್ರಿಕತೆಯ ನೀರಸ ಪ್ರಪಂಚವಾಗಿದೆ. ಪ್ರೀತಿ, ಸಹಬಾಳ್ವೆ ಸುಶೀಲ ಗುಣಗಳ ತವರಾಗಲು ನಮ್ಮ ಜನಪದ ಸಂಸ್ಕೃತಿ ಸಾಕಷ್ಟು ದುಡಿದಿದೆ. ಹೀಗಾಗಿ ಅದರಲ್ಲಿ ಸಾಹಿತ್ಯ, ಕಲೆ ರೀತಿ ನೀತಿಗೆ ಸಂಬಂಧಿಸಿದ ಹಲವು ಅಮೂಲ್ಯ ರತ್ನಗಳಿವೆ. ಆಧುನಿಕತೆಯ ಹೆಸರಿನಲ್ಲಿ ಬೆಡಗು ಬಿನ್ನಾಣಗಳಿಗೆ ಬಲಿಬಿದ್ದು ಆ ರತ್ನಗಳ ಬಗ್ಗೆ ಉಪೇಕ್ಷೆ ತಾಳುವುದು ಒಳ್ಳೆಯದಲ್ಲ. ಆಚರಣೆ ಆರಾಧನೆಗಳ ಹೆಸರಿನಲ್ಲಿ ಮೂಢ ನಂಬಿಕೆ ಅಜ್ಞಾನಗಳನ್ನು ಪೋಷಿಸಿಕೊಂಡು ಬರದೆ ವಿಚಾರಶೀಲರಾಗಿ ಪರಂಪರೆಯ ಸತ್ವಶೀಲಗುಣವನ್ನೆ ಸ್ವೀಕರಿಸಿ ಪ್ರಗತಿಯ ಹೊಸಬಾಳ್ವೆಯನ್ನು ಕಟ್ಟುವುದು ನಮ್ಮ ಮುಂದಿರುವ ಜವಾಬ್ದಾರಿ ಹೊಸ ಚಿಗುರು ಹಳೆ ಬೇರು ಕೂಡಿರಲು ಮರ ಸೊಗಸು ಎನ್ನುವಂತೆ ನಮ್ಮ ಹಳೆಯ ಸಂಸ್ಕೃತಿಯನ್ನು ಉಳಿಸಿ ಬೆಳೆಸುವುದು ಎಲ್ಲರ ಕರ್ತವ್ಯವಾಗಿದೆ.

ಅಧ್ಯಾಯ-5

# ಕಬ್ಬಳಿಯ ಜಾತ್ರೆಗಳು ಮತ್ತು ಉತ್ಸವಗಳು

ಒಂದು ಊರಿನಲ್ಲಿ ಹಲವು ಜಾತಿಯ, ಧರ್ಮದ ಜನರು ವಾಸಿಸುತ್ತಾರೆ. ಅವರಿಗೆ ಅವರದೇ ಆದ ಹಬ್ಬಗಳು, ಜಾತ್ರೆಗಳು, ಉತ್ಸವಗಳು, ಸಂಸ್ಕೃತಿಗಳು ಮೈವೆತ್ತು ಬಂದಿರುತ್ತವೆ. ಇದು ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದ ಪರಂಪರೆ.

ಈ ರೀತಿಯ ಹಬ್ಬ ಜಾತ್ರೆ, ಉತ್ಸವಗಳಲ್ಲಿ ಜಾತಿ ಧರ್ಮಗಳನ್ನು ಮರೆತು ಒಂದಾಗುವಿಕೆಯನ್ನು ಕಾಣಬಹುದು. ಕೆಲವು ಕಡೆ ತಮ್ಮ ಧರ್ಮದಿಂದ, ಹಬ್ಬ ಉತ್ಸವಗಳಿಂದ ಕೆಲವು ಜನಾಂಗಗಳನ್ನು ದೂರವಿಟ್ಟು ನೋಡುವುದಿದೆ. ಆದರೆ ಹಳ್ಳಿಗಳಲ್ಲಿ ಜಾತಿ ಧರ್ಮಗಳು ಬೇರೆಯಾದರೂ ಎಲ್ಲಾ ಜಾತಿಯವರು ಸೇರಿ ಆಚರಿಸುವ ಜಾತ್ರೆ ಉತ್ಸವಗಳು ಇರುತ್ತವೆ. ಅಂಥವುಗಳಿಗೆ ಕಬ್ಬಳಿಯಲ್ಲಿ ನಡೆಯುವ ಜಾತ್ರೆಗಳೇ ಸಾಕ್ಷಿ.

ಕಬ್ಬಳಿಯಲ್ಲಿ ನಡೆಯುವುದು ಪ್ರಮುಖವಾಗಿ ಎರಡು ಜಾತ್ರೆಗಳು, ಅವುಗಳಲ್ಲಿ ಶ್ರೀ ಕ್ಷೇತ್ರ ಕಬ್ಬಳಿ ಬಸವೇಶ್ವರ ದೇವರಿಗೆ ನಡೆಯುವ ಜಾತ್ರೆ ಪ್ರಮುಖವಾಗಿ ಕಂಡುಬರುತ್ತದೆ. ಕಾರ್ತೀಕ ಮಾಸದ ಮೊದಲ ಸೋಮವಾರದಿಂದ ಪ್ರಾರಂಭವಾಗುವ ಈ ಜಾತ್ರೆಗೆ ಪ್ರತಿದಿನ 10 ಸಾವಿರದಿಂದ 15 ಸಾವಿರದವರೆಗೆ ಭಕ್ತಾದಿಗಳು ಬಂದು ಹೋಗುತ್ತಾರೆ. ಈ ಜಾತ್ರೆ ಸುಮಾರು ಹದಿನೈದು ದಿನಗಳ ಕಾಲ ನಡೆಯುತ್ತದೆ. ತೇರಿನಗಾಲಿಗಳಿಗೆ ಭಕ್ತಾದಿಗಳು ತೆಂಗಿನ ಕಾಯಿಯನ್ನು ಹೊಡೆಯುವುದು ಈ ಜಾತ್ರೆಯಲ್ಲಿ ಮುಖ್ಯ ಆಕರ್ಷಣೆ. ಕಾರ್ತೀಕ ಸೋಮವಾರದಂದು ಬಸವದೇವರನ್ನು ಶೃಂಗರಿಸಿ ದೀಪಾಲಂಕಾರಗಳಿಂದ ದೇವಸ್ಥಾನವನ್ನು ಅಲಂಕಾರ ಮಾಡಲಾಗುತ್ತದೆ. ಆ ದಿನದ ಪ್ರಥಮ ಪೂಜೆಗೆ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಚಾಲನೆ ನೀಡುತ್ತಾರೆ. ಬಸವ ದೇವರನ್ನು ಒಂದು

ಮರದ ಹಲಗೆಯ ಅಟ್ಟೆಯ ಮೇಲೆ ಇಟ್ಟು ನಾಲ್ಕು ಜನ ಹೊತ್ತು ಮನೆ ಮನೆಗೂ ಹೋಗುತ್ತಾರೆ. ಭಕ್ತಾದಿಗಳು ಹಣ್ಣು ಕಾಯಿ ಅರ್ಪಿಸಿ ಕೃತಾರ್ಥರಾಗುತ್ತಾರೆ.

ಈ ಸಮಯದಲ್ಲಿ ದಲಿತ ಮಕ್ಕಳು ತಮ್ಮ ವಾದ್ಯ ನುಡಿಸುವ ಮೂಲಕ ದೇವರ ಮೆರವಣಿಗೆಯಲ್ಲಿ ಪಾಲ್ಗಳ್ಳುತ್ತಾರೆ. ಈ ಸಂದರ್ಭದಲ್ಲಿ ಪಟಾಕಿ, ಮದ್ದು ಗುಂಡುಗಳನ್ನು ಸಿಡಿಸಲಾಗುತ್ತದೆ. ಅಜ್ಜಿಯಂದಿರು ದೇವರನ್ನು ಕುರಿತು ಸೋಬಾನೆ ಪದಗಳನ್ನು ಹಾಡುತ್ತಾರೆ. ಬಸವೇಶ್ವರ ಮೆರವಣಿಗೆ ನಡೆಯುವಾಗ ಹರಿಜನ ಮಕ್ಕಳು ಹಾಡನ್ನು ಹಾಡಿ ಜನರನ್ನು ರಂಜಿಸುತ್ತಾರೆ. ಹಾಗೂ ಬಸವಣ್ಣನ ಕೃಪೆಗಾಗಿ ಹಂಬಲಿಸುತ್ತಾರೆ. ದೇವರ ಮೆರವಣಿಗೆ ನಡೆಯಬೇಕಾದರೆ ಇವರು ಹಾಡಲೇಬೇಕೆಂಬ ನಂಬಿಕೆಯಿದೆ.

ಬಸವಯ್ಯ ಹುಟ್ಟಾಲಿ ಹೊಸಪೇಟೆ ಕಟ್ಟಾಲಿ
ರಸಬಾಳೆ ಕಬ್ಬು ಬೆಳೆಯಾಲೀ
ರಸಬಾಳೆ ತಂದು ಬೆಳೆಯಾಲೀ
ಜಗಮುಖದ ತೇರು ಹರಿಯಾಲೀ

ಕಟ್ಟಿದ ಬುತ್ತಿ ಬಂದೋ, ಕಡೆಲೆಯ ಹೂವು ಬಂದೋ
ಇಟ್ಟಾಡಿ ಬಂದೋ ಈಡುಗಾಯೀ
ಇಟ್ಟಾಡಿ ಬಂದೋ ಈಡುಗಾಯಿ ಕಬ್ಬಾಳಿಯಾ
ಬೋರೆ ಮೇಲಿರುವ ಬಸವಯ್ಗೆ

ಹೊತ್ತು ಹುಟ್ಟೀತೋ ಹೂಡಯ್ಯ ರಥವಾ
ಮುತ್ತುಗದ ಹೂವ್ವಿನಂಗೆ ಬೆವರುತಾ
ಮುತ್ತುಗದ ಹೂವಿನಂಗೆ ಬೆವರುತ್ತಾ
ಕಬ್ಬಳಿ ಹತ್ತೇನೋ ಗೊಂಬೆ ಹೊಸತೇರಾ ಬಸವಯ್ಯ

ಬಾಗೀಲೂ ಚಿಕ್ಕದೂ ಬಗ್ಗಿ ಬಾರೋ ಬಸವಯ್ಯ

ಬಾಗಿಲಿಗೆ ಕುಸುರಿ ಬಿಡಿಸ್ಯಾರೇ

ಬಾಗಿಲಿಗೆ ಕುಸುರಿ ಬಿಡಿಸ್ಯರೇ

ಬಾಲಗಂಗಾಧರನಾಥ ಸ್ವಾಮೀಜಿ

ಈ ರೀತಿಯ ಹೂಗಾಳಿಯ ಹಾಡನ್ನು ಹೇಳಿಕೊಂಡು ಬಸವೇಶ್ವರನ ತೇರನ್ನು ಎಳೆಯಲಾಗುತ್ತದೆ. ಹಾಡಿಗೆ ತಕ್ಕ ವಾದ್ಯ ನುಡಿಸುತ್ತಾ ಜನರನ್ನು ಆಕರ್ಷಿಸಲಾಗುತ್ತದೆ. ಪ್ರಥಮ ಸೋಮವಾರದ ರಾತ್ರಿ ಸಾವಿರಾರು ಜನ ಭಕ್ತಾಧಿಗಳು ಸೇರಿ ರಥೋತ್ಸವ ನಡೆಸುತ್ತಾರೆ. ಪ್ರತಿ ಮನೆಯವರು ಒಂದೊಂದು ತೆಂಗಿನ ಕಾಯನ್ನು ದೇವರ ಮುಂದೆ ಹೊಡೆಯುತ್ತಾರೆ. ತೆಂಗಿನ ಕಾಯನ್ನು ಹೊಡೆಯುವುದರಿಂದ ಮನಸ್ಸಿನ ಆಸೆಗಳು ಈಡೇರುತ್ತವೆ ಎಂದು ಜನ ನಂಬಿದ್ದಾರೆ. ಮತ್ತೆ ಕೆಲವರು ಹರಕೆಗಳು ಈಡೇರಿದ್ದರಿಂದ ತೆಂಗಿನ ಕಾಯಿ ಹೊಡೆಯುತ್ತಾರೆ. ಭಕ್ತರು ಕೋಲಾಟ ನಡೆಸಿಕೊಡುವ ಮೂಲಕ ಜನರನ್ನು ಆಕರ್ಷಿಸುತ್ತಾರೆ.

ಹದಿನೈದು ದಿನ ನಡೆಯುವ ಈ ಜಾತ್ರೆಯಲ್ಲಿ ಪ್ರತಿದಿನವೂ ಜನಸಾಗರ ಹರಿದು ಬಂದು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ. ಹದಿನೈದು ದಿನವೂ ವಿವಿಧ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ. ಸಾಮಾನ್ಯದಿನಗಳಲ್ಲಿ ಬಸ್ಸು, ಕಾರು, ಆಟೋ ಇತ್ಯಾದಿಗಳಲ್ಲಿ ಬರುತ್ತಿದ್ದ ಜನರು ಈ ಜಾತ್ರೆಗೆ ಮಾತ್ರ ಹಳ್ಳಿ ಹಳ್ಳಿಗಳಿಂದ ಎತ್ತಿನ ಗಾಡಿಗಳನ್ನು ಹೂಡಿಕೊಂಡು ಅದರಲ್ಲಿ ಕುಟುಂಬ ಸಮೇತರಾಗಿ ಬಂದು ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಗಾಡಿಯನ್ನು ಎತ್ತುಗಳನ್ನು ಸುಂದರವಾಗಿ ಅಲಂಕಾರ ಮಾಡಿಕೊಂಡು ಬಂದಿರುತ್ತಾರಾದ್ದರಿಂದ ಎತ್ತಿನ ಗಾಡಿಯನ್ನು ನೋಡುವುದೇ ಕಣ್ಣಿಗೆ ಹಬ್ಬವಾಗು ಕಾಣುತ್ತದೆ. ಕೇವಲ ಮನೆಮಂದಿಯಷ್ಟೆ ಅಲ್ಲದೆ ತಮ್ಮ ಮನೆಯ ದನಗಳನ್ನು ದೇವರ ದರ್ಶನಕ್ಕೆ ಕರೆದೊಯ್ಯುವುದರಿಂದ ದೇವರ ಕೃಪೆಗೆ ಪಾತ್ರರಾಗಬಹುದು. ಎಂಬುದು ಇಲ್ಲಿನ ಸುತ್ತಲ ಹಳ್ಳಿಗಳ ನಂಬಿಕೆಯಾಗಿದೆ.

ಇನ್ನು ಜಾತ್ರೆಯಲ್ಲಿ ಕಟ್ಟದ ಅಂಗಡಿಗಳಂತೂ ಮನಸ್ಸಿಗೆ ಮುದ ನೀಡುತ್ತದೆ. ಪುರಿ ಅಂಗಡಿ ಮಿಠಾಯಿ ಅಂಗಡಿ, ಮಕ್ಕಳ ಆಟಿಕೆಗಳ ಅಂಗಡಿ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ. ಮನೋರಂಜನೆಯ ಆಟಕ್ಕೆಂದು ಸುತ್ತಲೂ ತಿರುಗುವ ವಿದ್ಯುತ್ ಜೋಕಾಲಿಗಳು ಜಾತ್ರೆಗೆ ಬಂದವರ ಮನ ಸೆಳೆಯುತ್ತವೆ. ಜಾತ್ರೆಗೆ ಬಂದ ಭಕ್ತಾದಿಗಳು ಊರಿನಲ್ಲಿ ಇರುವವರಿಗೆ ಪುರಿ, ಮಿಠಾಯಿ ಕಟ್ಟಿಸಿಕೊಂಡು ಹೋಗುವುದನ್ನು ಸರ್ವೇಸಾಮಾನ್ಯವಾಗಿ ನೋಡಬಹುದಾಗಿದೆ.

ಪ್ರತಿ ದಿನ ನಡೆಯುವ ಮನರಂಜನಾ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹೊರ ಊರಿನಿಂದ ಬಂದ ಭಕ್ತಾಧಿಗಳು ಬಸವೇಶ್ವರನ ಮೇಲೆಯೇ  ಹಾಡು ಕಟ್ಟಿ ಹಾಡುವುದು ಒಂದಾಗಿದೆ.

ಯಾಕೋ- ಯಾಕೇ
ಬಸವಯ್ಯ ಮುಖವೆಲ್ಲ ಸಪ್ಪಗೈತೆ
ನೋಡಾಕೆ ಬಂದಾರು ನಗುತಾರೆ
ನೋಡಾಕೆ ಬಂದಾರು ನಗುತಾರೆ ಬಸವಯ್ಯ
ಕಾಲೀಗೆ ಬಿದ್ದೇವೋ ಕಲಿಯಾಗ

ಕಬ್ಬಳಿಯ ಬಸವಯ್ಗೆ ಕಬ್ಬಿಣದ ಉಯ್ಯಾಲೆ
ಇಬ್ಬರೂ ತೂಗಿದರೂ ತೂಗಲ್ಲ ಮಲಕಲ್ಲಾ
ಇಬ್ಬರೂ ತೂಗಿದರೂ ತೂಗಲ್ಲ ಮಲಕ್ಕಲ್ಲಾ ಬಸವಯ್ಯ
ಸಿದ್ದಾರು ಕೂಗಿದರೆ ಧಣೀರೆಂದಾ

ಈ ರೀತಿ ಹೊರಗಿನಿಂದ ಬಂದ ಭಕ್ತರು ಹಾಡಿ ಹರ್ಷಗೊಳ್ಳುವುದನ್ನು ನೋಡಬಹುದಾಗಿದೆ. ಇನ್ನೂ ಬೇರೆ ಬೇರೆ ದಿನಗಳಲ್ಲಿ ಪಟಾಕಿ ಉತ್ಸವ, ರಂಗದ ಕುಣಿತ, ಸೋಬಾನೆಪದ, ಹಾಡು ಇತ್ಯಾದಿಗಳು ಇರುತ್ತವೆ. ಒಂದೊಂದು ದಿನ ಒಬ್ಬೊಬ್ಬರು ಪೂಜೆಯ ಕಾರ್ಯ ವಹಿಸಿಕೊಂಡು ನಡೆಸಿಕೊಡುತ್ತಾರೆ. ಅವರಲ್ಲಿ ಭಕ್ತಾದಿಗಳೇ ಹೆಚ್ಚಾಗಿರುತ್ತಾರೆ ಮತ್ತು ಬಸವೇಶ್ವರನ ಮನೆತನದವರೆಂದು ಹೇಳಿಕೊಳ್ಳುವ ಜನರು ಹೆಚ್ಚಾಗಿ ಭಾಗವಹಿಸುತ್ತಾರೆ. ಹದಿನೈದು ದಿನದವರೆಗೂ ಜಾತ್ರೆಯಲ್ಲಿ ಉತ್ಸವಗಳು ತುಂಬಾ ವಿಶೇಷವಾಗಿ ಆಕರ್ಷಕವಾಗಿ ನಡೆಯುತ್ತವೆ. ಹಾಗೆಯೇ ಜನರ ಮನರಂಜನೆಗಾಗಿ ಕುರುಕ್ಷೇತ್ರ, ಶನಿಮಹಾತ್ಮೆ, ಪಾರ್ವತಿ ಕಲ್ಯಾಣ, ಇಂತಹ ಪೌರಾಣಿಕ ನಾಟಕಗಳನ್ನು ಆಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಆರ್ಕೆಸ್ಟ್ರಾವನ್ನು ಕೂಡ ನಡೆಸಲಾಗುತ್ತಿದ್ದು, ಇದು ಹೆಚ್ಚು ಜನರನ್ನು ಆಕರ್ಷಿಸಿದರೆ ಇದರ ಬಗ್ಗೆ ಹಿರಿಯ ತಲೆಗಳಿಗೆ ಅಸಮಾಧಾನವಿರುವುದನ್ನು ಗಮನಿಸಬಹುದಾಗಿದೆ.

ಜಾತ್ರೆಯ ಮೂರನೇ ಸೋಮವಾರ ಅಂತಿಮ ದಿನ ಅಂದು ಎಂದಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಸುತ್ತ ಮುತ್ತಲ ಹಳ್ಳಿಗಳಿಂದ ಜನ ಬಂದು ಸೇರುತ್ತಾರೆ. ಅಂದು ವಿಶೇಷ ಭೋಜನದ ವ್ಯವಸ್ಥೆಯೂ ಇರುತ್ತದೆ. ದೇವರ ಮುಂದೆ ಕಾಯಿ ಹೊಡೆಯುವವರ ಸಂಖ್ಯೆಯೂ ಅಧಿಕವಾಗಿರುತ್ತದೆ. ಹೀಗೆ ಹದಿನೈದು ದಿನ ನಡೆಯುವ ಜಾತ್ರೆಯಲ್ಲಿ ಬಸವೇಶ್ವರನನ್ನು ಸುತ್ತಿಸುವ ಕಥೆ, ಹಾಡಿನ ಸಿ.ಡಿ. ಗಳು ಇಲ್ಲಿ ಹೇರಳವಾಗಿ ಮಾರಾಟವಾಗುತ್ತವೆ ಎಂದು ಕ್ಯಾಸೆಟ್ ಅಂಗಡಿಯ ಗಂಗಣ್ಣ ಹೇಳುತ್ತಾರೆ. ಒಟ್ಟಾರೆ ಕಾರ್ತೀಕ ಮಾಸದಲ್ಲಿ ನಡೆಯುವ ಈ ಜಾತ್ರೆ ವಿಶೇಷವಾಗಿ ಭಕ್ತಾದಿಗಳನ್ನು ಆಕರ್ಷಿಸುತ್ತದೆ. ಎಂದು ಹೇಳಬಹುದು.

## 2 ನೇ ಜಾತ್ರೆ

ಇದು ಕಬ್ಬಳಿ ಗ್ರಾಮದಲ್ಲಿರುವ ಬಸವೇಶ್ವರನಿಗೆ ನಡೆಯುವ ಎರಡು ದಿನದ ಜಾತ್ರೆ. ಈ ಜಾತ್ರೆಯಲ್ಲಿ ಪ್ರಮುಖ ಆಕರ್ಷಣೆಯೆಂದರೆ ರಂಗದ ಕುಣಿತ ಮತ್ತು ತೇರಿನ ಕಲ್ಲಿನ ಗಾಲಿಗಳಿಗೆ ತೆಂಗಿನ ಕಾಯಿ ಹೊಡೆಯುವುದು. ಇದನ್ನು ರೈತ ಮಕ್ಕಳ ಹಬ್ಬವೆಂದು ಇಲ್ಲಿನ

ಜನ ಹೇಳುತ್ತಾರೆ. ಇದಕ್ಕೆ ರಂಗದಹಬ್ಬ ಎಂದು ಊರಿನಲ್ಲಿ ಕರೆಯುತ್ತಾರೆ. ಹದಿನೈದು ದಿನಗಳ ಕಾಲ ಪ್ರತಿ ರಾತ್ರಿ ರಂಗದ ಕುಣಿತ, ಕುಣಿದ ಮೇಲೆ ಕಡೆಯ ಎರಡು ದಿನ ಜಾತ್ರೆ ನಡೆಯುತ್ತದೆ. ಮತ್ತು ಅಂತಿಮ ದಿನ ಇಡೀ ರಾತ್ರಿ ರಂಗ ಕುಣಿಯುವ ಮೂಲಕವೇ ಈ ಹಬ್ಬ ಜಾತ್ರೆಯನ್ನು ರಂಗುಗೊಳಿಸಲಾಗುತ್ತದೆ.

ರಂಗದ ಕುಣಿತದಲ್ಲಿ ಪ್ರಮುಖ ಆಕರ್ಷಣೆಯೆಂದರೆ ವಿರಾಮದ ನಡುವೆ ಬರುವ ವೇಷಗಳು ಈ ವೇಷಗಳಲ್ಲಿ

ಬಸವನ ವೇಷ

ಸುಬೇದಾರನ ವೇಷ

ಮಾರಿ ವೇಷ

ರೈತನ ವೇಷ

ಸಿಪಾಯಿ ವೇಷ

ಗಳು ಜನರನ್ನು ಪ್ರಮುಖವಾಗಿ ಆಕರ್ಷಿಸುತ್ತವೆ. ಅಲ್ಲದೆ ಈ ವೇಷಗಳಲ್ಲಿ ವಿಡಂಬನೆಗೆ ಊರಿನ ಹಿರಿಯರನ್ನೂ ಯುವಕರನ್ನು ಸಂಭಾಷಣೆಯಲ್ಲಿ ಬಳಸಿಕೊಳ್ಳುತ್ತಾರೆ. ಅಂದಿನ ರಾತ್ರಿ ಪಂಜಿನ ಮೆರವಣಿಗೆ ಆಕರ್ಷಣೆಯಾಗಿರುತ್ತದೆ. ಬಸವೇಶ್ವರನಿಗೆ ನಡೆಯುವ ಈ ಎರಡು ಜಾತ್ರೆಗಳಲ್ಲಿ ಶ್ರೀ ಕ್ಷೇತ್ರದ ಜಾತ್ರೆಯು ಪ್ರಮುಖವಾದುದಾಗಿದೆ. ಈ ರಂಗದ ಜಾತ್ರೆಯು ಅಷ್ಟೇನೂ ವಿಜೃಂಭಣೆಯಿಂದ ನಡೆಯದೆ ಇದ್ದರೂ ಊರಿನ ಜನರೆಲ್ಲ ವಿಶೇಷವಾಗಿ ಭಾಗವಹಿಸುತ್ತಾರೆ. ಹೊರಗಿನಿಂದ ಬರುವ ಭಕ್ತಾದಿಗಳು ಸಹ ಬಹಳ ಕಡಿಮೆ ಜನ. ಹೀಗೆ ಅನೇಕ ನಂಬಿಕೆ, ಸಂಸ್ಕೃತಿ, ಆಚರಣೆಯ ಕೇಂದ್ರವಾಗಿರುವ ಶ್ರೀ ಕ್ಷೇತ್ರ ಕಬ್ಬಳಿಯಲ್ಲಿ ನಡೆಯುವ ಜಾತ್ರೆ ಉತ್ಸವಗಳನ್ನು ಮೇಲಿನಂತೆ ವಿಶ್ಲೇಷಿಸಿ ನೋಡಬಹುದಾಗಿದೆ.

## ಸಂತೆ

ಶ್ರೀ ಕ್ಷೇತ್ರ ಕಬ್ಬಳಿಯ ಪ್ರಮುಖ ಆಕರ್ಷಣೆಗಳಲ್ಲಿ ಸಂತೆಯೂ ಒಂದು. ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯ ಒಡೆತನಕ್ಕೆ ಕ್ಷೇತ್ರವನ್ನು ಬಿಟ್ಟುಕೊಟ್ಟ ಮೇಲೆ ಇಲ್ಲಿ ಪ್ರತಿವಾರ ಸಂತೆ ನಡೆಯುವಂತೆ ವ್ಯವಸ್ಥೆ ಮಾಡಲಾಗಿದೆ. ಪ್ರತಿ ಮಂಗಳವಾರ ಇಲ್ಲಿ ಸಂತೆ ನಡಯುತ್ತದೆ. ಈ ಸಂತೆಯಲ್ಲಿ ತೆಂಗಿನ ಕಾಯಿ ವ್ಯಾಪಾರವೇ ಹೆಚ್ಚಾಗಿ ನಡೆಯುತ್ತದೆ. ಹಾಗೆಯೇ ಸಂತೆಗೆ ಬರುವ ಜನರಿಗೆ ಮತ್ತು ವ್ಯಾಪಾರಸ್ಥರಿಗೆ ವಾಹನಗಳ ವ್ಯವಸ್ಥೆ ಇದೆ. ಈ ಸಂತೆಯಲ್ಲಿ ತೆಂಗಿನ ಕಾಯಿ ವ್ಯಾಪಾರದ ಜೊತೆಗೆ ಹಣ್ಣು, ತರಕಾರಿ ಸೊಪ್ಪುಗಳ ವ್ಯಾಪಾರ ಮುಖ್ಯವಾಗಿ ಕಂಡುಬರುತ್ತದೆ.

ಮುಖ್ಯವಾಗಿ ಈ ಸಂತೆಗೆ ಬರುವ ತೆಂಗಿನಕಾಯಿಗಳು ಸಿಪ್ಪೆ ಸುಲಿಯದೆ ಬರುತ್ತವೆ. ಈ ಕಾಯಿಗಳು ವ್ಯಾಪಾರವಾಗದಿದ್ದರೆ ಸಂತೆಯಲ್ಲೆ ರಾಶಿಹಾಕಿ ಹೋಗುತ್ತಾರೆ. ರೈತರು ಮತ್ತು ವ್ಯಾಪಾರಸ್ತರು ಇಬ್ಬರೂ ಅಷ್ಟೆ. ಸರಿಯಾದ ಬೆಲೆ ಬರದಿದ್ದರೆ ತೆಂಗಿನಕಾಯಿ ರಾಶಿ ಹಾಕಿ ಹೋಗುತ್ತಾರೆ. ಕಾಯಿಯನ್ನು ಯಾರೂ ಕದಿಯುವುದಿಲ್ಲ. ಈ ನಂಬಿಕೆ ಈ ಊರಿನ ಸುತ್ತಲಿರುವ ಎಲ್ಲಾ ಹಳ್ಳಿಯ ಜನರಿಗೂ ಇದೆ. ಏಕೆಂದರೆ ಸಂತೆಯಲ್ಲಿರುವ ಕಾಯಿಯನ್ನು ಬಸವೇಶ್ವರನು ಕದಿಯದಂತೆ ಕಾವಲಿರುತ್ತಾನೆ ಎಂಬ ಬಲವಾದ ನಂಬಿಕೆ ಇದೆ. ಈಗಲೂ ಈ ನಂಬಿಕೆ ಮುಂದುವರೆದಿದೆ. ಆದರೆ ರಾಶಿ ಹಾಕಿರುವ ತೆಂಗಿನ ಕಾಯನ್ನು ಕದ್ದು ದಂಡ ವಿಧಿಸಿರುವ ಸಂಗತಿಗಳು ಬಹಳ ಇವೆ ಎಂದು ಹೇಳುತ್ತಾರೆ. ಹೀಗೆ ಕಬ್ಬಳಿ ಸಂತೆಯನ್ನು ವಿಶ್ಲೇಷಿಸಿ ನೋಡಬಹುದಾಗಿದೆ.

## ಅಧ್ಯಾಯ-6

# ಶ್ರೀ ಕ್ಷೇತ್ರದ ಸ್ಥಳ ಮಹಿಮೆ

ಜಗತ್ತಿನಲ್ಲಿ ಯಾವುದೇ ಒಂದು ಸಂಕಥನ ಇದ್ದಕ್ಕಿದ್ದಂತೆ ಉದ್ಭವಿಸಿದ್ದಲ್ಲ. ಅದರಲ್ಲಿ ಚಾರಿತ್ರಿಕ ಐತಿಹಾಸ, ಧಾರ್ಮಿಕ, ಸಾಂಸ್ಕೃತಿಕ ಹಿನ್ನಲೆಗಳು ಜೀವ ಪಡೆದು ಮೂರ್ತಗೊಂಡಿರುತ್ತವೆ. ಹಾಗಾಗಿ ಒಂದು ಸಂಸ್ಕೃತಿಗೆ ಒಂದು ಧರ್ಮಕ್ಕೆ, ಒಂದು ದೇವಾಲಯಕ್ಕೆ ಇವೆಲ್ಲವನ್ನು ಒಳಗೊಂಡ ಒಂದು ಊರಿಗೆ, ಪಟ್ಟಣಕ್ಕೆ ಅದರದೇ ಆದ ವೈಶಿಷ್ಟ್ಯ ಕುಡಿಯೊಡೆದು ಹಬ್ಬಿನಿಂತಿರುತ್ತವೆ.

ಶ್ರೀ ಕ್ಷೇತ್ರ ಕಬ್ಬಳಿಗೂ ಇಂತಹದೊಂದು ಧಾರ್ಮಿಕ ಸಾಂಸ್ಕೃತಿಕ ಚೌಕಟ್ಟನ್ನು ಒದಗಿಸಿ ಅದರ ಸುತ್ತ ಹಲವು ದಂತಕಥೆಗಳ ಗುಚ್ಛವನ್ನು ಇಡಲಾಗಿದೆ. ಕಬ್ಬಳಿ ಗ್ರಾಮದಿಂದ ಒಂದು ಕಿಲೋಮೀಟರ್ ದೂರದಲ್ಲಿರುವ ಶ್ರೀ ಕ್ಷೇತ್ರ ಕಬ್ಬಳಿ ಉಗಮವಾಗಿದ್ದಾದರೂ ಹೇಗೆ? ಎಂಬ ಪ್ರಶ್ನೆಗೆ ಉತ್ತರ ಹುಡುಕಿ ಹೊರಟಾಗ ಸಿಕ್ಕ ಮಾಹಿತಿಗಳು ಹಲವಾರು. ಈಗಿನ ಶ್ರೀ ಕ್ಷೇತ್ರ ಸುಮಾರು 50–60 ವರ್ಷಗಳ ಹಿಂದೆ ಅನೇಕ ಕಾಡು ಮರಗಳಿಂದ ಆವರಿಸಿಕೊಂಡಿತ್ತು. ಅಲ್ಲಿ ದನ, ಕುರಿಗಳನ್ನು ಮೇಯಿಸಲು ಹಲವಾರು ಜನರು ಬರುತ್ತಿದ್ದರು. ದನಗಾಹಿ ಹುಡುಗರು ಆಟವಾಡುತ್ತಿರಬೇಕಾದರೆ ಋಷಿಮುನಿಗಳು ಉಪಯೋಗಿಸುವ ಕಮಂಡಲ ಒಂದು ಚಿಲುಮೆ ವಿಭೂತಿ ದೊರೆಯುತ್ತದೆ. ಈ ಹುಡುಗರು ಇದನ್ನು ಕಬ್ಬಳಿ ಊರಿನ ಹಿರಿಯರಿಗೆ ತಂದು ತೋರಿಸಿದಾಗ ಇಲ್ಲಿ ಸಾಧು, ಮಹಾತ್ಮರು ಐಕ್ಯವಾಗಿರಬೇಕು ಅವರಿಂದಲೆ ಬಸವನ ವಿಗ್ರಹದ ಪ್ರತಿಷ್ಠಾಪನೆಯಾಗಿರಬೇಕೆಂದು ಕಬ್ಬಳಿಯ ಹಿರಿಯರು ಅಭಿಪ್ರಾಯಪಟ್ಟು ಅದನ್ನು ಹುಡುಗರಿಗೆ ತಿಳಿಸುತ್ತಾರೆ ಆ ನಂಬಿಕೆಯೆ ಇಂದಿಗೂ ಚಾಲ್ತಿಯಲ್ಲಿದೆ.

ಮತ್ತೊಂದು ದಂತ ಕಥೆ ಎಂದರೆ ಕೈಲಾಸದಲ್ಲಿ ಒಂದು ದಿನ ಪರಮೇಶ್ವರ ಮತ್ತು ಪಾರ್ವತಿದೇವಿಯರು ಲೀಲೆಯಿಂದಿರುವ ಕಾಲದಲ್ಲಿ ಪಾರ್ವತಿ ದೇವಿಯು ಸ್ವಾಮಿ ನಿಮ್ಮ ಅವತಾರಗಳು ಮುಗಿದವೆ ? ಎಂದು ಪ್ರಶ್ನಿಸುತ್ತಾಳೆ. ಆಗ ಪರಮೇಶ್ವರನು

ನೋಡು ನನ್ನ ಅವತಾರಗಳು ಮುಗಿಯುವುದಿಲ್ಲ, ಜಗತ್ತು ಮುಳುಗುವುದಿಲ್ಲ. ಎಂದನು. ಆಗ ಪಾರ್ವತಿ ಇನ್ನಾವ ರೂಪದಲ್ಲಿ ಪ್ರತ್ಯಕ್ಷನಾಗುವೆ ಎಂದಳು. ಆಗ ಶಿವನು ನೋಡು ಪಾರ್ವತಿ ಅಂಗ ಅವತಾರಗಳು ಕೋಟ್ಯಾಂತರ ಮುಗಿದಿವೆ. ಈಗ ನೋಡು ನಮ್ಮ ವಾಹನ ನಂದೀಶನ ಸ್ವರೂಪದಲ್ಲಿ ಒಂದು ಹಸುವಿನ ಹೊಟ್ಟೆಯಲ್ಲಿ ಜನ್ಮತಾಳಿ ಇದೇ ಕಬ್ಬಳಿ ಗ್ರಾಮದ ಬೋರೇಗೌಡರ ಮನೆಯಲ್ಲಿ ಜನಿಸುತ್ತೇನೆ. ಆಮೇಲೆ ಕೆಲವು ದಿನಗಳಲ್ಲಿ ಪಕ್ಕದ ಕಾಡನ್ನು ಸೇರಿ ಅಲ್ಲಿ ಸ್ಥಿರವಾಗಿ ನೆಲೆಯೂರಿ ನಿಂತು ನನ್ನ ಭಕ್ತರಿಗೆ ಇಷ್ಟಾರ್ಥಗಳನ್ನು ಕೊಟ್ಟು ಕಾಪಾಡುತ್ತೇನೆ. ಎಂದು ಹೇಳುತ್ತಾನೆ.

ಅದೇ ರೀತಿ ಬೋರೇಗೌಡರ ಮನೆಯಲ್ಲಿ ಜನಿಸಿದ ಒಂದು ಹೋರೀ ಕರು ಕಾಡನ್ನು ಸೇರುತ್ತದೆ. ಕೆಲವು ದಿನಗಳ ಮೇಲೆ ಹೋರಿ ಅಲ್ಲೇ ತೀರಿಕೊಳ್ಳುತ್ತದೆ. ಕಬ್ಬಳಿ ಗ್ರಾಮದ ಜನರೆಲ್ಲ ಅದನ್ನು ಸಮಾಧಿ ಮಾಡಿ ಗೋರಿ ಕಟ್ಟಿ ಅದರ ಮೇಲೆ ಕಂಚಿನ ಬಸವನ ವಿಗ್ರಹ ಸ್ಥಾಪಿಸಲಾಗಿದೆ ಎಂದು ಅಲ್ಲಿನ ಜನ ತಿಳಿಸುತ್ತಾರೆ.

ಅನಂತರ ಒಂದಾನೊಂದು ದಿವಸ ಇದೇ ಮಾರ್ಗದಲ್ಲಿ ಒಬ್ಬ ಸಾಧುಗಳು ಪ್ರಯಾಣ ಮಾಡುತ್ತಾರೆ. ಆ ಸಾಧುಗಳು ಬಿಸಿಲಿನ ತಾಪದಿಂದ ನರಳಿ ಸೋತು ಬಾಯಾರಿ ಪಕ್ಕದ ಕಟ್ಟೆಯಲ್ಲಿ ನೀರನ್ನು ಕುಡಿದು ನೇರಳೆ ಮರದ ಕೆಳಗೆ ಕುಳಿತುಕೊಂಡರು. ಆ ಸಾಧುಗಳಿಗೆ ಬಹಳ ಸಂತೋಷವಾಗಿ ಅವರು ಅಲ್ಲಿಯೇ ಒಂದು ಗುಡಿಸಲನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದರು. ಸುತ್ತಲ ಜನರು ಮಾಮೂಲಿನಂತೆ ದನಕರುಗಳನ್ನು ಮೇಯಿಸಲು ಆ ತೋಪಿಗೆ ಬರುತ್ತಿದ್ದರು. ಆಗ ಆ ಮರದ ಕೆಳಗೆ ಕುಳಿತಿದ್ದ ಸ್ವಾಮೀಜಿಯನ್ನು ಕಂಡು ಎಲ್ಲರೂ ನಮಸ್ಕರಿಸುತ್ತಾರೆ. ಆನಂತರ ಅವರನ್ನೇ ಬಸವಣ್ಣನ ಪೂಜಾ ಕಾರ್ಯ ನಡೆಸಿಕೊಡುವಂತೆ ವಿನಂತಿಸಿಕೊಳ್ಳುತ್ತಾರೆ. ಇದಕ್ಕೆ ಒಪ್ಪಿದ ಸ್ವಾಮಿಗಳು ಬಸವಣ್ಣನ ಪೂಜಾ ವಿಧಿ ನಡೆಸಿಕೊಂಡು ಬರುತ್ತಿದ್ದವರು ಕಾಲಾನಂತರದಲ್ಲಿ ಈ ವನದಲ್ಲಿಯೇ ಮರಣ

ಹೊಂದುತ್ತಾರೆ. ಊರಿನ ಜನಗಳೆಲ್ಲ ಸೇರಿ ಅವರನ್ನು ದೇವಸ್ಥಾನದ ಪಕ್ಕದಲ್ಲಿಯೇ ಸಮಾಧಿ ಮಾಡುತ್ತಾರೆ. ಮುಂದೆ ದೇವಸ್ಥಾನದ ಪುನರುತ್ಥಾನ ಮಾಡುವ ಸಂದರ್ಭದಲ್ಲಿ ನೆಲವನ್ನು ಅಗೆಯುವಾಗ ಪಾಳಿ, ಚಿಲುಮೆ, ವಿಭೂತಿ ಮತ್ತು ಮೂಳೆಗಳು ದೊರೆತವು ಅವು ಹಿಂದೆ ದೇವಸ್ಥಾನದ ಪೂಜಾವಿಧಿ ನಿರ್ವಹಿಸುತ್ತಿದ್ದ ಸಾಧುಗಳವೆ ಇರಬೇಕೆಂದು ಜನ ಅವನ್ನು ಗೌರವದಿಂದ ಮತ್ತೆ ಮಣ್ಣಲ್ಲಿ ಹೂತು ಅದರ ಮೇಲೆ ದೇವಸ್ಥಾನ ಕಟ್ಟಿದರೆಂದು ಬಸವೇಶ್ವರ ಗುಡಿಯ ಪಕ್ಕದಲ್ಲಿ ಇರುವ ಧ್ವನಿಸುರುಳಿ ಅಂಗಡಿಯ ಗಂಗಣ್ಣನವರು ಹೇಳುತ್ತಾರೆ.



ಮತ್ತೊಂದು ದಂತಕಥೆಯ ಪ್ರಕಾರ ಹೋರಿಕರು ಒಂದು ತನ್ನ ತಾಯಿಯನ್ನು ಬಿಟ್ಟು ಈ ತೋಪಿನಲ್ಲಿ ಒಂದು ಬಿಲ್ವವೃಕ್ಷದ ಬಳಿ ಮಲಗುವುದು ರೂಢಿಯಾಗುತ್ತದೆ. ಊರಿನ ಜನರೆಲ್ಲ ಆ ಹೋರಿಕರುವನ್ನು ಹಿಡಿಯಲು ಯತ್ನಿಸುತ್ತಾರೆ. ಅದು ಯಾರ ಕೈಗೂ ಸಿಗುವುದಿಲ್ಲ. ಅದು ಎಲ್ಲಿಂದ ಹೇಗೆ ಬಂತು ? ಅದರ ವಾರಸುದಾರರು ಯಾರು ? ಎಂಬುದು ಯಾರಿಗೂ ತಿಳಿಯುವುದಿಲ್ಲ. ಆ ಸಂದರ್ಭದಲ್ಲಿ ಸಾಧು ಒಬ್ಬರ ಬಳಿ ಶಾಸ್ತ್ರ ಕೇಳಲಾಯಿತು. ಅವರು ಆ ಬಸವನೇ ನಿಜವಾದ ಪರಮಾತ್ಮ ಶಿವ ಬೇರೆ ಯಾರೂ ಅಲ್ಲ, ಎಂದು ಹೇಳುತ್ತಾರೆ. ಕಾಲಾನಂತರದಲ್ಲಿ ಆ ಬಸವ ತೀರಿಕೊಂಡಿತು ಅದರ ಸಮಾಧಿಯ ಮೇಲೆ ಈಗಿನ ಬಸವೇಶ್ವರನ ಗರ್ಭಗುಡಿಯಿದೆ ಎಂದು ಕಬ್ಬಳಿ ಗ್ರಾಮದ 85 ರ ವಯೋವೃದ್ಧ ಶಿವಲಿಂಗೇಗೌಡರು ಹೇಳುತ್ತಾರೆ.

ಇನ್ನೂ ಕೆಲವರು ಹೇಳುವಂತೆ ಈಗ ಇರುವ ಕಲ್ಯಾಣಿಯಲ್ಲಿ ಶಿವಪಾರ್ವತಿಯರು ಸ್ನಾನ ಮಾಡಿ ವನದಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಈ ವನಕ್ಕೆ ಕಾವಲಾಗಿರುವಂತೆ ತನ್ನ ವಾಹನ ನಂದೀಶನನ್ನು ಬಿಟ್ಟು ಕೈಲಾಸಕ್ಕೆ ಹೋದರೆಂದು, ಆ ನಂದೀಶ್ವರನೇ ಈಗಿನ ಶ್ರೀ ಬಸವೇಶ್ವರನೆಂದು ಹಲವರ ನಂಬಿಕೆಯಾಗಿದೆ. ಹೀಗೆ ಅನೇಕ ದಂತ ಕಥೆಗಳನ್ನು ತನ್ನ ಒಡಲೊಳಗೆ ಬಚ್ಚಿಟ್ಟುಕೊಂಡಿರುವ ಶ್ರೀ ಕ್ಷೇತ್ರ ಕಬ್ಬಳಿಯು ಹಲವು

ವಿಶಿಷ್ಟ ರೀತಿಯ ನಂಬಿಕೆ ಶ್ರದ್ಧಾಭಕ್ತಿಗಳ ತಾಣವಾಗಿದೆ. ಶ್ರೀ ಕ್ಷೇತ್ರದಲ್ಲಿ ಪ್ರತಿಸ್ಥಾಪಿತವಾಗಿರುವ ಶ್ರೀ ಬಸವೇಶ್ವರ ಸ್ವಾಮಿ ಸನ್ನಿಧಿಯು ಸುತ್ತ ಹತ್ತಾರು ಹಳ್ಳಿಗೆ ಮಾತ್ರವಲ್ಲ ರಾಜ್ಯದ ನಾನಾ ಮೂಲೆಯ ಜನರ ಭಕ್ತಿಯ ಕೇಂದ್ರ ಸ್ಥಾನವಾಗಿದೆ.

**ನಂಬಿಕೆಗಳು**

ಸುಮಾರು 19ನೇ ಶತಮಾನದಲ್ಲಿ ಲಿಂಗೇಗೌಡ ಎಂಬುವವರಿಗೆ ಮದುವೆಯಾಗಿ ಬಹಳ ವರ್ಷಗಳಾದರೂ ಮಕ್ಕಳಾಗದ ಕಾರಣ ಶ್ರೀ ಬಸವೇಶ್ವರ ಸ್ವಾಮಿಗೆ ಹರಕೆ ಮಾಡಿಕೊಂಡರು. ಕೆಲವೇ ದಿನಗಳಲ್ಲಿ ಲಿಂಗೇಗೌಡರ ಹೆಂಡತಿ ಗರ್ಭವತಿಯಾಗಿ ಗಂಡು ಮಗುವಿಗೆ ಜನ್ಮ ನೀಡಿದಳು ಆ ಮಗುವಿಗೆ ಬಸವಲಿಂಗ ಎಂದೇ ಹೆಸರಿಟ್ಟರು. ಅಲ್ಲದೇ ಶ್ರೀ ಸ್ವಾಮಿಯ ವರದಿಂದ ಸಂತಾನ ಪ್ರಾಪ್ತವಾದುದಕ್ಕೆ ಲಿಂಗೇಗೌಡರು ಒಂದು ಕಲ್ಯಾಣಿಯನ್ನು ಕಟ್ಟಿಸಿಕೊಟ್ಟರು ಎಂದು ಜನರು ಹೇಳುತ್ತಾರೆ. ಮತ್ತೊಂದು ದಿನ ನಾಗರ ಹಾವು ಕಚ್ಚಿದ ಒಬ್ಬ ವ್ಯಕ್ತಿಯನ್ನು ಈ ಮಾರ್ಗದಲ್ಲಿ ಕರೆದುಕೊಂಡು ಹೋಗುವ ಸಂದರ್ಭದಲ್ಲಿ ಅಲ್ಲಿದ್ದ ಸಾಧು ಒಬ್ಬರು ಅವನನ್ನು ಶ್ರೀ ಬಸವೇಶ್ವರ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಪ್ರಸಾದ ನೀಡಿದರು. ಆಗ ಹಾವು ಕಚ್ಚಿದ ವ್ಯಕ್ತಿ ಬದುಕುಳಿದ. ಸ್ವಾಮಿಯ ಘನಮಹಿಮೆಯನ್ನು ಮೆಚ್ಚಿ ಬದುಕುಳಿದ ವ್ಯಕ್ತಿ ಜನರ ನೆರಳಿನ ಆಶ್ರಯಕ್ಕೊಂದು ಮಂಟಪವನ್ನು ಕಟ್ಟಿಸಿಕೊಟ್ಟನು. ಈ ಮಂಟಪ ಈಗಲೂ ದೇವಸ್ಥಾನದ ಎಡಭಾಗದಲ್ಲಿದೆ. ಹಾವು, ಚೇಳು ಕಚ್ಚಿದ ವ್ಯಕ್ತಿಗಳನ್ನು ಒಂದು ರಾತ್ರಿ ಬಸವೇಶ್ವರನ ಗುಡಿಯಲ್ಲಿ ಇಟ್ಟು ಪ್ರಸಾದ ನೀಡಿ ವಿಶೇಷ ಪೂಜೆ ನಡೆಸಿದರೆ ಬದುಕುಳಿಯುತ್ತಾನೆ ಎಂಬ ನಂಬಿಕೆ ಶ್ರೀ ಕ್ಷೇತ್ರದ ಸುತ್ತ ಮುತ್ತಲಿನ ಗ್ರಾಮದ ಜನಗಳಲ್ಲಿ ಇನ್ನೂ ಜೀವಂತವಾಗಿದೆ.

ಕಬ್ಬಳಿಯ ಬಸವೇಶ್ವರನ ಸುತ್ತ ಹರಡಿರುವ ನಂಬಿಕೆಗಳಲ್ಲಿ ಗಂಗಮ್ಮ ಬಾವಿಯ ನಂಬಿಕೆಯೂ ಒಂದು ಬಸವೇಶ್ವರ ಸ್ವಾಮಿಯ ದೇವಸ್ಥಾನದಿಂದ ಸ್ವಲ್ಪ ದೂರವಿರುವ ಗಂಗಮ್ಮ ಬಾವಿಯಲ್ಲಿ ಇದುವರೆಗೂ ನೀರು ಬತ್ತಿಲ್ಲವಂತೆ. ಎಂತಹ ಬರಗಾಲದಲ್ಲೂ

ಗಂಗಮ್ಮ ಬಾವಿಯಲ್ಲಿ ನೀರು ಇದ್ದೇ ಇರುತ್ತದೆ ಎಂದು ಕಬ್ಬಳಿಯ ಜನ ಹೇಳುತ್ತಾರೆ. ಇದರ ಹಿನ್ನೆಲೆ ಕೇಳಿದಾಗ ಜನರ ನಂಬಿಕೆ ಹೀಗಿದೆ, ಬಸವೇಶ್ವರನು ಈ ಕಾಡಿನಲ್ಲಿ ಅಲೆಯುತ್ತಿರುವಾಗ ಬಾಯಾರಿಕೆಯಾದಾಗಲೆಲ್ಲ ಈ ಗಂಗಮ್ಮ ಬಾವಿಯಲ್ಲಿ ನೀರು ಕುಡಿಯುತ್ತಿದ್ದರಂತೆ ಆದ್ದರಿಂದ ಗಂಗಮ್ಮ ಬಾವಿಯಲ್ಲಿ ಇಂದಿಗೂ ನೀರು ಬತ್ತಿಲ್ಲ ಎಂದು ಜನ ತಿಳಿಸುತ್ತಾರೆ.

ಮತ್ತೊಂದು ದಂತ ಕಥೆಯ ಪ್ರಕಾರ ಒಮ್ಮೆ ಕಬ್ಬಳಿ ಗ್ರಾಮದಲ್ಲಿ ವಿಪರೀತ ಬರಗಾಲ ಬಂದು ದನ-ಕರುಗಳಿಗೆ ನೀರು ಸಿಗದಂತಾಯಿತಂತೆ. ಇದರಿಂದ ಕಂಗಾಲಾದ ಜನರು ಕಬ್ಬಳಿಯ ಸ್ವಾಮಿ ದೇವಸ್ಥಾನಕ್ಕೆ ತೆರಳಿ ಭಕ್ತಿ ಭಜನೆಗಳಿಂದ ಪ್ರಾರ್ಥಿಸಿ ತಮ್ಮ ದನ-ಕರುಗಳನ್ನು ಉಳಿಸಿಕೊಡುದೇವ ಎಂದು ಕೇಳುತ್ತಾರೆ. ಇದರಿಂದ ಪ್ರತ್ಯಕ್ಷನಾದ ಬಸವೇಶ್ವರನು ಜನರ ಕೈಯಲ್ಲಿ ಬಾವಿಯನ್ನು ತೋಡಿಸಿದರಂತೆ ಬಾವಿಯನ್ನು ಎಷ್ಟು ಆಳ ತೋಡಿದರೂ ನೀರು ಬರದಿದ್ದಾಗ ಬಾವಿ ತೆಗೆಯುವುದನ್ನು ಅರ್ದಕ್ಕೆ ನಿಲ್ಲಿಸಿ ಜನರು ಊರಕಡೆ ಹೊರಡಲು ಅನುವಾಗುತ್ತಾರೆ. ಆಗ ಬಸವೇಶ್ವರನು ಜನರನ್ನು ತಡೆದು ನಿರಾಶರಾಗದಿರಿ ನಾನು ನಿಮಗೆ ಈ ಬಾವಿಯಲ್ಲಿ ನೀರನ್ನು ಕರುಣಿಸುತ್ತೇನೆ. ಆದರೆ ನಿಮ್ಮ ಮನೆಯಲ್ಲಿ ಹಸುಗಳು ಕರುಹಾಕಿದಾಗ ಹಸುವಿನ ಹಾಲಿನ ಪ್ರಥಮ ನೈವೇದ್ಯ ನನಗೆ ಆಗಬೇಕು ಎಂದು ಕೇಳಿದನಂತೆ. ಅದಕ್ಕೆ ಗ್ರಾಮದ ಜನರೆಲ್ಲ ಒಪ್ಪಿಗೆ ನೀಡಿದಾಗ ಬಾವಿಯಲ್ಲಿ ನೀರು ತುಂಬಿ ದನ-ಕರುಗಳಿಗೆ ಯಥೇಚ್ಚವಾಗಿ ನೀರು ದೊರಕಿತಂತೆ. ಅಂದಿನಿಂದ ಇಂದಿನ ವರೆಗೂ ಗಂಗಮ್ಮ ಬಾವಿಯಲ್ಲಿ ನೀರು ಬತ್ತಿಲ್ಲ ಇದು ಶ್ರೀ ಸ್ವಾಮಿಯ ವರಪ್ರಸಾದ ಎಂದು ಕಬ್ಬಳಿಯ ಜನರು ಹೇಳುತ್ತಾರೆ. ಆದರೆ ಇತ್ತೀಚೆಗೆ ಕೊಳವೇ ಬಾವಿಗಳನ್ನು ತೆಗೆಸಿದ ಮೇಲೆ ಗಂಗಮ್ಮ ಬಾವಿಯ ವರೆಗೆ ನೀರಿಗಾಗಿ ಯಾರೂ ಹೋಗುವುದಿಲ್ಲ. ಆದರೂ ಗಂಗಮ್ಮ ಬಾವಿಯ ಬಗ್ಗೆ ಜನರಿಗೆ ಇಂದಿಗೂ ಭಯ ಭಕ್ತಿ ಇರುವುದನ್ನು ಕಾಣಬಹುದಾಗಿದೆ.

ಹೀಗೆ ಅನೇಕ ಶ್ರದ್ಧಾನಂಬಿಕೆಗಳಿಂದ ಕೂಡಿದ ಶ್ರೀ ಕ್ಷೇತ್ರವನ್ನು ಅಭಿವೃದ್ಧಿಗೊಳಿಸುವ ಪ್ರಯತ್ನ ನಡೆಯುತ್ತಲೇ ಇದೆ. 20ನೇ ಶತಮಾನದ ಹೊತ್ತಿಗೆ ಕಬ್ಬಳಿ ಕ್ಷೇತ್ರ

ದೊಡ್ಡ ಪುಣ್ಯ ಕ್ಷೇತ್ರವಾಗುತ್ತದೆ ಎಂದು ಸಾಧುಗಳು ತಾವು ಸಾಯುವ ಮುನ್ನ ಹೇಳಿದ ಮಾತು ನಿಜವಾಗುತ್ತಿದೆ. 2000ನೇ ಇಸವಿಯಲ್ಲಿ ಶ್ರೀ ಆದಿಚುಂಚನಗಿರಿ ಮಠದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯ ಆಶ್ರಯಕ್ಕೆ ಕಬ್ಬಳಿಯ ಶ್ರೀ ಕ್ಷೇತ್ರವನ್ನು ಹಸ್ತಾಂತರ ಮಾಡಲಾಯಿತು. ಇಂದಿಗೂ ಸ್ವಾಮೀಜಿಗಳ ಒಡೆತನದಲ್ಲಿ ಪ್ರತಿದಿನ ಪೂಜೆ ಅನ್ನ ಸಂತರ್ಪಣೆ ಗಳೊಂದಿಗೆ ಅಭಿವೃದ್ಧಿಯ ಕಾರ್ಯವು ಸುಸೂತ್ರವಾಗಿ ನಡೆದುಕೊಂಡು ಹೋಗುತ್ತಿದೆ. ಈಗಲೂ ಜನರಲ್ಲಿ ಶ್ರೀ ಕ್ಷೇತ್ರ ಕಬ್ಬಳಿಯ ಮೇಲೆ ಅಪಾರ ನಂಬಿಕೆ ಇದೆ. ಮಕ್ಕಳಿಲ್ಲದವರು ಸ್ವಾಮಿಗೆ ಹರಕೆಮಾಡಿ ಪ್ರಸಾದ ಸ್ವೀಕರಿಸಿದರೆ ಮಕ್ಕಳಾಗುತ್ತವೆ. ಹಾವು ಕಚ್ಚಿದವರು ಇಲ್ಲಿ ಬಂದು ರಾತ್ರಿ ತಂಗಿದರೆ ವಿಷಕಳೆದು ಬದುಕುಳಿಯುತ್ತಾರೆ. ಹಾಗೆಯೇ ದನ–ಕರುಗಳಿಗೆ ರೋಗಬಂದರೆ ಇಲ್ಲಿಗೆ ಹರಕೆಹೊತ್ತರೆ ದನ–ಕರುಗಳು ಗುಣವಾಗುತ್ತವೆ. ಅಲ್ಲದೆ ಹಸುಗಳು ಕರುಹಾಕಿದರೆ ಗಿಣ್ಣು ಮತ್ತು ಹಾಲಿನ ಬುತ್ತಿಯನ್ನು ತಂದು ಸ್ವಾಮಿಗೆ ಪೂಜೆ ಮಾಡಿಸಿಕೊಂಡು ಹೋಗುವುದರಿಂದ ಅವರುಗಳ ಇಷ್ಟಾರ್ಥಗಳೆಲ್ಲ ಸಿದ್ಧಿಸುತ್ತವೆ ಎಂದು ದೇವರ ಅರ್ಚಕರು ಅಭಿಪ್ರಾಯ ಪಡುತ್ತಾರೆ.

ಪ್ರತಿದಿನ ಇಲ್ಲಿ ಬರುವ ಭಕ್ತರ ಸಂಖ್ಯೆ ಅಪಾರ. ಇಲ್ಲಿ ಬಂದು ಜನರು ಮನಸ್ಸಿನ ಬೇಗುದಿಗಳನ್ನು ಹೇಳಿಕೊಂಡು ಇಷ್ಟಾರ್ಥಗಳನ್ನು ತೋಡಿಕೊಂಡರೆ ಅವೆಲ್ಲ ಸಿದ್ಧಿಸುತ್ತವೆ. ಆದ್ದರಿಂದ ಶ್ರೀ ಸ್ವಾಮಿಯ ಮೇಲೆ ಬಹಳ ನಂಬಿಕೆ ಇಟ್ಟಿದ್ದೇವೆ ಎಂದು ಭಕ್ತಾಧಿಗಳು ಹೇಳುತ್ತಾರೆ. ಅಲ್ಲದೆ ತಾಯಂದಿರಿಗೆ ಎದೆಯಲ್ಲಿ ಹಾಲು ಬರದಿದ್ದರೆ, ಹಸುಗಳು ಹಾಲು ನೀಡದಿದ್ದರೆ ಸ್ವಾಮಿಗೆ ಹರಕೆ ಮಾಡಿಕೊಂಡರೆ ಹಾಲು ಬರುತ್ತದೆಂದು ಜನರು ನಂಬುತ್ತಾರೆ. ವಾರದ ಏಳು ದಿನಗಳೂ ದೇವಸ್ಥಾನದ ಪೂಜಾ ವಿಧಿಗಳು ನಡೆಯುತ್ತವೆ. ಆದರೆ ಇತರ ದಿನಗಳಲ್ಲಿ ಬರುವ ಭಕ್ತರ ಸಂಖ್ಯೆಗಿಂತ ಸೋಮವಾರ ಬರುವ ಭಕ್ತರ ಸಂಖ್ಯೆ ಹೆಚ್ಚು ಎಂದು ಅರ್ಚಕರು ಹೇಳುತ್ತಾರೆ. ಏಕೆಂದರೆ ಸೋಮವಾರ ಶ್ರೀ ಸ್ವಾಮಿಯ ವಾರವಾದ್ದರಿಂದ ದೇವಸ್ಥಾನಕ್ಕೆ ಹೊಗುವುದು ಒಳ್ಳೆಯದು ಎಂಬ ನಂಬಿಕೆ ಜನರಲ್ಲಿದೆ.

ಮತ್ತೊಂದು ಆಶ್ಚರ್ಯಕರ ಮತ್ತು ಅಪರೂಪದ ಸಂಗತಿ ಎಂದರೆ ಇಲ್ಲಿ ಸಂತೆ ನಡೆಯುತ್ತದೆ. ಈ ಸಂತೆಗೆ ತೆಂಗಿನ ಕಾಯಿ ತಂದವರು ವ್ಯಾಪಾರವಾಗದಿದ್ದರೆ ವಾಪಾಸ್ ತೆಗೆದುಕೊಂಡು ಹೋಗುವುದಿಲ್ಲ. ದೇವಸ್ಥಾನದ ಎದುರಿನ ಖಾಲಿ ಜಾಗದಲ್ಲಿ ರಾಶಿ ಹಾಕಿ ಹೋಗುತ್ತರೆ. ಯಾರೂ ಒಂದು ಕಾಯನ್ನು ಕಳ್ಳತನ ಮಾಡುವುದಿಲ್ಲ. ಜನರು ಮುಂದಿನವಾರ ಬಂದು ಸಂತೆಯಲ್ಲಿ ಕಾಯನ್ನು ವ್ಯಾಪಾರ ಮಾಡುತ್ತರೆ. ವ್ಯಾಪಾರವಾಗದಿದ್ದರೆ ಮತ್ತೆ ಅಲ್ಲೇ ಬಿಟ್ಟು ಹೋಗುತ್ತಾರೆ. ಈ ಪದ್ಧತಿ ಈಗಲೂ ನಡೆಯುವುದನಬ್ಬು ಶ್ರೀ ಕ್ಷೇತ್ರದಲ್ಲಿ ಗಮನಿಸಬಹುದು. ಒಂದು ವೇಳೆ ಕಾಯಿಯ ಕಳ್ಳತನವಾದರೆ ಶ್ರೀ ಸ್ವಾಮಿಯು ಕಳ್ಳರಿಗೆ ಕೊಡಬಾರದ ಕಷ್ಟ ಕೊಡುತ್ತನೆ ಆಗ ಆ ಕಾಯಿಗಳನ್ನು ಕದ್ದವರೇ ಪುನಃ ತಂದು ರಾಶಿಗೆ ಹಾಕುತ್ತಾರೆ. ಎಂಬ ಬಲವಾದ ನಂಬಿಕೆ ಜನರಲ್ಲಿದೆ.

ಇಂದು ಆಧುನಿಕ ಜಗತ್ತು ಎಷ್ಟೇ ಮುಂದುವರಿದಿದ್ದರೂ ಈ ರೀತಿಯ ನಂಬಿಕೆಗಳು ಜನರ ಮನಸ್ಸಿನಲ್ಲಿ ಬಲವಗಿ ಬೇರು ಬಿಟ್ಟಿವೆ. ದೇವಸ್ಥಾನದ ಎದುರಿನಲ್ಲಿ ರಾಶಿ ಬಿದ್ದಿರುವ ತೆಂಗಿನ ಕಾಯಿಗಳನ್ನು ಈಗಲೂ ನೋಡಬಹುದು. ಅಲ್ಲಿನ ಪರಿಚಿತರನ್ನು ಇಲ್ಲಿನ ತೆಂಗಿನ ಕಾಯನ್ನು ಯಾರೂ ಕಳವು ಮಾಡುವುದಿಲ್ಲವೆ ಎಂದು ವಿಚಾರಿಸಿದಾಗ ಈ ವಿಷಯವನ್ನು ಹೇಳಿದರು. ಇತ್ತೀಚೆಗೆ ಕೆಲವರು ಕಾಯಿ ಕದ್ದು ಶ್ರೀ ಬಸವೇಶ್ವರ ಸ್ವಾಮಿಯ ಮಹಿಮೆಯಿಂದ ಸಿಕ್ಕಿಕೊಂಡು ತಪ್ಪನ್ನು ಒಪ್ಪಿಕೊಂಡಿದ್ದಾರೆ. ಅವರಿಗೆ ದಂಡವನ್ನು ಹಾಕಲಾಗಿದೆಯಂತೆ. ಸುಮಾರು 25 ಎಕರೆ ವಿಸ್ತೀರ್ಣದಲ್ಲಿ ಇರುವ ಶ್ರೀ ಕ್ಷೇತ್ರ ಕಬ್ಬಳಿಯು ಕೋಟ್ಯಾಂತರ ಭಕ್ತ ಸಮೂಹವನ್ನು ತನ್ನತ್ತ ಸೆಳೆದುಕೊಂಡಿದೆ. ಕಾರ್ತೀಕ ಸೋಮವಾರಗಳಂದು ವಿಶೇಷ ಪೂಜೆ ನಡೆಯುವುದರಿಂದ ಭಕ್ತರ ದಂಡೇ ಆಗಮಿಸುತ್ತದೆ.

ಕಬ್ಬಳಿಯ ಬಸವಣ್ಣ ಕೇವಲ ಕಬ್ಬಳಿಯ ಜನರಿಗಷ್ಟೇ ಆರಾಧ್ಯ ದೈವವಾಗಿಲ್ಲ. ಶ್ರೀ ಸ್ವಾಮಿಯ ದರ್ಶನ ಪಡೆಯಲು ರಾಜ್ಯದ ವಿವಿಧ ದಿಕ್ಕುಗಳಿಂದ ಭಕ್ತರ ಸಮೂಹ ಬರುತ್ತದೆ. ಕಬ್ಬಳಿ ಸುತ್ತಮುತ್ತಲಿನ ಊರಿನವರಿಗಂತೂ ಶ್ರೀ ಸ್ವಾಮಿಯ ಬಗ್ಗೆ ಅಪಾರ ನಂಬಿಕೆ ಇದೆ. ಯಾರೂ ಶ್ರೀ ಸ್ವಾಮಿಯ ಬಗ್ಗೆ ಉಡಾಫೆಯ ಮಾತು ಆಡುವುದಿಲ್ಲ. ಒಟ್ಟಿನಲ್ಲಿ ಶ್ರೀ ಕ್ಷೇತ್ರ ಕಬ್ಬಳಿಯು ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚು ಭಕ್ತರನ್ನು ಆಕರ್ಷಿಸುತ್ತಿದೆ.

ಅಧ್ಯಾಯ–7

# ಮದುವೆ ಕಾರ್ಯಗಳು

ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮವೂ ಒಂದು. ಮನುಷ್ಯ ತನ್ನ ಬದುಕಿನ ಸಂಪೂರ್ಣತೆಯನ್ನು ಕಾಣಲು ಆತ ಗೃಹಸ್ಥನಾಗಬೇಕು ಎಂಬುದು ಹಿರಿಯರ ಕಿವಿಮಾತು. ಮದುವೆ ಕಾರ್ಯವು ಪ್ರಾಚೀನ ಕಾಲದಿಂದಲೂ ತನ್ನದೇ ಆದ ರೀತಿ–ನೀತಿ ಚೌಕಟ್ಟನ್ನು ಒಳಗೊಂಡಿತ್ತು. ಮನುಷ್ಯ ನಾಗರೀಕನಾಗುತ್ತಾ ಹೋದಂತೆ ಮದುವೆಯ ಸ್ವರೂಪವೂ ಬದಲಾಗುತ್ತಾ ಹೋಯಿತು. ಕೌಟುಂಬಿಕ ಸಂಭ್ರಮಾಚರಣೆಯಾಗಿ ಉಳಿಯಬೇಕಿದ್ದ ಈ ಕಾರ್ಯ ಸಾಮಾಜಿಕ ಕಾರ್ಯವಾಗಿ ರೂಪುಗೊಂಡಿದೆ. ಅಂದರೆ ವೈಯಕ್ತಿಕ ಹಿತ ದೃಷ್ಟಿಗಿಂತ ಸಾರ್ವಜನಿಕ ಪ್ರತಿಷ್ಠೆಯಾಗಿ ಪರಿವರ್ತಿತವಾಗಿದೆ. ಮದುವೆಯ ಹೆಸರಿನಲ್ಲಿ ಅದ್ದೂರಿತನ ಕಂಡುಬರುತ್ತಿದೆ. ಇದಕ್ಕೆ ಅಪವಾದವಾಗಿ ಶ್ರೀ ಕ್ಷೇತ್ರದಲ್ಲಿ ನಡೆಯುವ ಮದುವೆಗಳು ಕಂಡುಬರುತ್ತವೆ.

ಕಳೆದ ೭–೮ ವರ್ಷಗಳಿಂದ ಶುಭಕಾರ್ಯ ವಿವಾಹಗಳ ಕೇಂದ್ರವಾಗಿ ಶ್ರೀ ಕ್ಷೇತ್ರವು ಪರಿವರ್ತಿತವಾಗಿದೆ. ಸರಳ ವಿವಾಹದ ಹೆಸರಿನಿಂದ ಪ್ರಾರಂಭವಾಗಿ ಇಂದು ಕಲ್ಯಾಣ ಮಂಟಪ ನಿರ್ಮಿಸುವವರೆಗೂ ಮದುವೆಕಾರ್ಯಗಳು ಜರುಗಿವೆ. ಪ್ರಾರಂಭದ ದಿನಗಳಲ್ಲಿ ಬಡವರು ಮಾತ್ರ ಶ್ರೀ ಸ್ವಾಮಿಯ ಸನ್ನಿಧಿಯಲ್ಲಿ ವಿವಾಹ ಮಾಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಮದುವೆಯ ಸ್ಥಳವನ್ನು ಗೊತ್ತು ಪಡಿಸುವಾಗ ಶ್ರೀ ಕ್ಷೇತ್ರದ ಹೆಸರು ಮೊದಲು ಪ್ರಸ್ತಾಪವಾಗುತ್ತದೆ. ಒಂದು ಮದುವೆಯಾದಾಗ ವರನ ಕಡೆಯವರು ನೂರು ರೂ ಮತ್ತು ವಧುವಿನ ಕಡೆಯವರು ನೂರು ರೂ.ಗಳನ್ನು ಸ್ವಾಮಿಗೆ ದಕ್ಷಿಣೆಯಾಗಿ ಕೊಡುತ್ತಿದ್ದರು. ಶ್ರೀ ಸ್ವಾಮಿಯ ಅರ್ಚಕರೇ

ಪೌರೋಹಿತ್ಯ ವಹಿಸಿ ಮದುವೆ ಕಾರ್ಯ ನೆರವೇರಿಸುತ್ತಾರೆ. ಶ್ರೀ ಕ್ಷೇತ್ರದಲ್ಲಿ ವಿವಾಹ ಕಾರ್ಯಗಳು ದಿನದಿಂದ ದಿನಕ್ಕೆ ಅಧಿಕವಾಗುತ್ತಿವೆ. ಕೇವಲ ಸುತ್ತ ಮುತ್ತಲಿನ ಗ್ರಾಮದವರಲ್ಲದೆ ಬೆಂಗಳೂರು, ಮೈಸೂರು, ಭದ್ರಾವತಿ, ತುಮಕೂರು ಹೀಗೆ ರಾಜ್ಯದ ನಾನಾ ಕಡೆಗಳಿಂದ ಜನರು ಬಂದು ತಮ್ಮ ಮಕ್ಕಳಿಗೆ ವಿವಾಹ ಕಾರ್ಯ ಮಾಡಿಕೊಂಡು ಹಿಂದಿರುಗುತ್ತಾರೆ. ಮೊದಮೊದಲು ದೇವಸ್ಥಾನ ಒಂದೇ ವಿವಾಹದ ಸ್ಥಳವಾಗಿತ್ತು. ಇದರಿಂದ ಜನರಿಗೆ, ಭಕ್ತರಿಗೆ ಅನಾನುಕೂಲತೆ ಉಂಟಾಗುತ್ತಿತ್ತು. ಇದನ್ನು ಗಮನಿಸಿದ ಶ್ರೀ ಕ್ಷೇತ್ರದ ಕೆಲವು ಹಿರಿಯರು ಕಲ್ಯಾಣ ಮಂಟಪವನ್ನು ನಿರ್ಮಿಸಿ ವಿವಾಹ ಕಾರ್ಯಗಳಿಗೆಂದು ಉಚಿತವಾಗಿ ಮೀಸಲಿಟ್ಟಿದ್ದಾರೆ.

ಶ್ರೀ ಕ್ಷೇತ್ರವನ್ನು ಶ್ರೀ ಆದಿಚುಂಚನಗಿರಿ ಮಠಕ್ಕೆ ಹಸ್ತಾಂತರಿಸಿದಾಗ ಇಲ್ಲಿನ ಉಸ್ತುವಾರಿ ಸ್ವಾಮೀಜಿ ಶ್ರೀ ಶ್ರೀ ಶಿವಕುಮಾರನಾಥ ಸ್ವಾಮಿಯವರು ಕೆಲವು ನಿಯಮಗಳನ್ನು ಅನುಸರಿಸುವಂತೆ ಮಾಡಿದ್ದಾರೆ. ಪರಿಣಾಮವಾಗಿ ಪ್ರತಿಯೊಂದು ವಿವಾಹಕ್ಕೂ ೧೦೦೦ ರೂಪಾಯಿಗಳನ್ನು ದಕ್ಷಿಣೆಯ ಹಣವಾಗಿ ಪಡೆದುಕೊಳ್ಳಲಾಗುತ್ತದೆ. ಕಲ್ಯಾಣ ಮಂಟಪಗಳಲ್ಲಿ ಜರುಗುವ ವಿವಾಹಗಳಿಗೆ ಶುಲ್ಕ ಸ್ವಲ್ಪ ಅಧಿಕ ಅಂದರೆ ೬೦೦೦ ರೂಪಾಯಿಗಳನ್ನು ಕೊಟ್ಟರೆ ವಿಜೃಂಭಣೆಯ ಮದುವೆಯ ರೀತಿಯಲ್ಲೇ ಎಲ್ಲಾ ರೀತಿಯ ಪರಿಕರಗಳನ್ನು ಒದಗಿಸಿಕೊಡಲಾಗುತ್ತದೆ. ಮದುವೆಯ ಲಗ್ನದ ದಿನಗಳಲ್ಲಿ ವಿವಾಹ ನಡೆಯದೇ ಇರುವ ದಿನವಿಲ್ಲ. ದಿನಕ್ಕೆ ಕನಿಷ್ಠ ೬ರಿಂದ ೭ ಮದುವೆಗಳಾಗುತ್ತವೆ. ಒಂದೊಂದು ದಿನದಲ್ಲಿ ೨೫ ಮದುವೆಗಳು ಆಗಿರುವುದುಂಟು. ಇಂತಹ ಸಂದರ್ಭದಲ್ಲಿ ಎಲ್ಲಾ ಜೋಡಿಗಳಿಗೂ ತಾಳಿಕಟ್ಟಿಸುವ ಕಾರ್ಯವನ್ನು ದೇವಸ್ಥಾನದ ಮುಂಭಾಗದಲ್ಲಿ ಅರ್ಚಕರು ನೆರವೇರಿಸಿದರೆ ಉಳಿದ ಊಟೋಪಚಾರ ಅವರವರ ಬಂಧುಗಳ ಸಮ್ಮುಖದಲ್ಲಿ ನಡೆಯುತ್ತದೆ. ಹೀಗೆ ಪ್ರತಿ ವರ್ಷವೂ ಮದುವೆಕಾರ್ಯವೊಂದರಿಂದಲೇ ಸುಮಾರು ಹತ್ತು ಲಕ್ಷದ ವರೆಗೆ ಶ್ರೀ ಕ್ಷೇತ್ರಕ್ಕೆ ಆದಾಯ ಬರುವುದು ಆಶ್ಚರ್ಯವಾದರೂ ಸತ್ಯವಾದುದು. ವಿವಾಹವೆಂಬುದು ಪ್ರತಿಯೊಬ್ಬ ವ್ಯಕ್ತಿಯ ಬದುಕಿನ ಅಮೂಲ್ಯ ಹಾಗೂ ಅಪೂರ್ವ ಕ್ಷಣ. ನಂತರದ ಬದುಕು ಸುಂದರಗೊಳ್ಳಬೇಕು,

ಇದು ಪ್ರತಿಯೊಬ್ಬರ ಬಯಕೆಯೂ ಹೌದು. ಆದರೆ ಕೆಲವರು ಘನತೆ, ಶ್ರೀಮಂತಿಕೆಯ ಪ್ರದರ್ಶನ, ದೊಡ್ಡಸ್ತಿಕೆ ಮೊದಲಾದ ಭ್ರಮೆಗಳಿಗಾಗಿ ಲಕ್ಷಾಂತರ ರೂಪಾಯಿಗಳನ್ನು ಸಾಲಸೋಲಮಾಡಿ ಮದುವೆಯ ದಿನಮಾತ್ರ ನಗುವನ್ನು ತುಂಬಿಕೊಂಡು ಅನಂತರದ ದಿನಗಳಲ್ಲಿ ಸಾಲದ ಸುಳಿಗೆ ಸಿಗುತ್ತಾರೆ. ಆದರೆ ಅವೆಲ್ಲಕ್ಕೂ ಕಡಿವಾಣವಾಗಿ ಶ್ರೀ ಬಸವೇಶ್ವರಸ್ವಾಮಿ ಸನ್ನಿಧಿಯು ವಿವಾಹದ ಪುಣ್ಯಕ್ಷೇತ್ರವಾಗಿ ರೂಪುಗೊಂಡು ಸಾವಿರಾರು ದಂಪತಿಗಳ ಬದುಕಿಗೆ ಬೆಳಕು ನೀಡಿದೆ ಮತ್ತು ನೀಡುತ್ತಿದೆ.

## ಸ್ವಾಮಿಗಳ ಪರಂಪರೆ

ಶ್ರೀ ಕ್ಷೇತ್ರ ಕಬ್ಬಳಿಯ ಶ್ರೀ ಬಸವೇಶ್ವರಸ್ವಾಮಿ ಸನ್ನಧಿಯಲ್ಲಿ ಸ್ವಾಮಿಗಳ ಪರಂಪರೆಯ ಇತಿಹಾಸ ಸುದೀರ್ಘವಾದುದೇನು ಅಲ್ಲ. ಸುಮಾರು ಹತ್ತು ವರ್ಷಗಳ ಹಿಂದೆ ಅಜ್ಞಾತ ವ್ಯಕ್ತಿಯೊಬ್ಬ ಕಾವಿಧಾರಿಯಾಗಿ ಬಂದು ದೇವಸ್ಥಾನದಲ್ಲೇ ಉಳಿಯತೊಡಗಿದಂದಿನಿಂದ ಸ್ವಾಮಿಗಳ ಪರಂಪರೆಗೆ ಚಾಲನೆ ದೊರೆಯಿತು. ಅವಧೂತ ಸ್ವಾಮಿಯೆಂದು ಹೆಸರನ್ನಿಟ್ಟುಕೊಂಡ ಕಾವಿಧಾರಿಯು ಭವಿಷ್ಯದಲ್ಲಿ ದೊಡ್ಡ ಅಲೆಯೊಂದನ್ನು ಸೃಷ್ಟಿಸುತ್ತಾರೆ ಎಂದು ಯಾರೂ ಊಹೆ ಮಾಡಿರಲಿಲ್ಲ. ಶ್ರೀ ಅವಧೂತರು ಕ್ರಿ.ಶ ೧೯೯೯ ರಲ್ಲಿ ಕೆಲವೇ ಕೆಲವು ಭಕ್ತಾದಿಗಳೊಂದಿಗೆ ಬಸವೇಶ್ವರಸ್ವಾಮಿಗೆ ಮಾಲೆ ಹಾಕಿಸಿಕೊಳ್ಳುವ ಸಂಪ್ರದಾಯಕ್ಕೆ ನಾಂದಿ ಹಾಡಿದರು. ಶ್ರೀ ಅವಧೂತ ಸ್ವಾಮಿ ತೀರಿಕೊಂಡ ಬಳಿಕ ಶ್ರೀ ಕ್ಷೇತ್ರವು ಶ್ರೀ ಆದಿಚುಂಚನಗಿರಿ ಮಠಕ್ಕೆ ಹಸ್ತಾಂತರಗೊಂಡು ಶ್ರೀ ಶ್ರೀ ಶಿವಕುಮಾರನಾಥಸ್ವಾಮೀಜಿಯವರು ತಮ್ಮ ನೇತೃತ್ವದಲ್ಲಿ ಕೆಲಸ ಕಾರ್ಯಗಳನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಸ್ವಾಮೀಜಿಯವರು ಪಂಡಿತರೊಬ್ಬರನ್ನು ಶ್ರೀ ಕ್ಷೇತ್ರದಲ್ಲೇ ಇರುವಂತೆ ನೇಮಿಸಿದ್ದಾರೆ. ಪಂಡಿತರು (ಹೆಸರು ರಾಮಕೃಷ್ಣ) ಶ್ರೀ ಕ್ಷೇತ್ರದ ಎಲ್ಲಾ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ.

ಅಧ್ಯಾಯ-8

# ಧನುರ್ಮಾಸ ಪೂಜೆ ಮತ್ತು ಅದರ ವಿಶೇಷತೆ

**ಮಾಲೆ ಹಾಕಿಸಿಕೊಳ್ಳುವುದು.**

ಶ್ರೀ ಕ್ಷೇತ್ರ ಕಬ್ಬಳಿಗೆ ಸಂಸ್ಕೃತಿಯ ಹೊಸ ಕಿರೀಟವಾಗಿ ಮಾಲೆ ಹಾಕಿಸಿಕೊಳ್ಳುವ ಪದ್ಧತಿ ಪ್ರಾರಂಭವಾಗಿದೆ. ಡಿಸೆಂಬರ್, ಜನವರಿ, ತಿಂಗಳಿನಲ್ಲಿ ನಡೆಯುವ ಈ ಪೂಜೆಯನ್ನು ಧನುರ್ಮಾಸ ತಿಂಗಳಿನ ವಿಶೇಷ ಪೂಜಾ ಕಾರ್ಯಕ್ರಮ ಎಂದೇ ಕರೆಯಲಾಗುತ್ತದೆ. ಒಂದು ತಿಂಗಳುಗಳ ಕಾಲ ನಡೆಯುವ ಪೂಜೆಗೆ ಜನವರಿ ೧ಳ ರಂದು ತೆರೆಬೀಳುತ್ತದೆ.

ನಂಬಿದವರಿಗೆ ಕಲ್ಲು ಕೂಡ ದೇವರು ಎಂಬ ಆಡುನುಡಿಯು ಶ್ರೀ ಕ್ಷೇತ್ರದ ವಿಚಾರದಲ್ಲಿ ನಿಜವಾಗಿದೆ. ದೂರದ ಶಬರಿಮಲೆ ಸ್ವಾಮಿಗಳ ಪಡಿಯಚ್ಚಾಗಿ ಶ್ರೀ ಕ್ಷೇತ್ರದ ಬಸವೇಶ್ವರ ಸ್ವಾಮಿಯ ಭಕ್ತರು ಕಂಡುಬರುತ್ತಾರೆ. ಶಬರಿಮಲೆಗೆ ಹೋಗುವ ಭಕ್ತರು ಅನುಸರಿಸುವ ಕಟುವಿಧಿ ವಿಧಾನಗಳು ಶ್ರೀ ಕ್ಷೇತ್ರ ಸ್ವಾಮಿಯ ಪೂಜೆಯಲ್ಲಿ ಕಂಡುಬರುತ್ತವೆ. ಇತ್ತೀಚೆಗೆ ಶ್ರೀ ಸ್ವಾಮಿಗೆ ಮಾಲೆಹಾಕಿಸಿಕೊಳ್ಳುವ ಸಂಪ್ರದಾಯ ಪ್ರವರ್ಧಮಾನಕ್ಕೆ ಬರುತ್ತಿದೆ. ಧನುರ್ಮಾಸ ತಿಂಗಳು ಪ್ರಾರಂಭವಾದಾಗ ಶ್ರೀ ಕ್ಷೇತ್ರ ಕಬ್ಬಳಿಯಲ್ಲಿ ಒಬ್ಬ ಹಿರಿಯ ಗುರು ಬಯಸುವ ಭಕ್ತರೆಲ್ಲರಿಗೂ ಮಾಲೆ ಹಾಕುತ್ತಾರೆ ಇವರನ್ನು ಗುರುಸ್ವಾಮಿ ಎಂದು ಕರೆಯಲಾಗುತ್ತದೆ.

ಪ್ರಾರಂಭದ ದಿನಗಳಲ್ಲಿ ಕೇವಲ ಬೆರಳಣಿಕೆಯಷ್ಟು ಮಂದಿ ಮಾತ್ರ ಮಾಲೆ ಹಾಕಿಸಿಕೊಳ್ಳುತ್ತಿದ್ದರು. ಇಂದು ಮಾಲೆ ಹಾಕಿಸಿಕೊಳ್ಳುವವರ ಭಕ್ತರ ಸಂಖ್ಯೆ ಲಕ್ಷಕ್ಕೂ ಅಧಿಕವಾಗಿದೆ. ಮಾಲೆ ಹಾಕಿಸಿಕೊಳ್ಳುವುದು ಎಂದರೆ ಗುರುಸ್ವಾಮಿಯು ಪೂಜಿಸಿಕೊಟ್ಟಂತಹ ರುದ್ರಾಕ್ಷಿ ಮಣಿಗಳ ಮಾಲೆ ಹಾಕಿಕೊಂಡು ಕೆಂಪು ವಸ್ತ್ರವನ್ನು ತೊಡುವುದು. ಮಾಲೆ ಹಾಕಿಸಿಕೊಂಡ ದಿನದಿಂದ ಅವರನ್ನು ಸ್ವಾಮಿ ಎಂದು ಕರೆಯಬೇಕು. ಸ್ವಾಮಿಗಳು ಮನೆಗೆ ಬರುವಂತಿಲ್ಲ ತಮ್ಮ ಊಟ, ಉಪಚಾರಗಳನ್ನು ತಾವೇ ಮಾಡಿಕೊಳ್ಳುತ್ತಾರೆ.

**ಧ್ವಜ ಕಳಸ ತೆಗೆದುಕೊಂಡು ಹೋಗುವುದು.**

ಮಾಲೆ ಹಾಕಿಸಿಕೊಳ್ಳುವ ಪದ್ಧತಿಯಲ್ಲಿ ಕಳಸ ಧ್ವಜ ತೆಗೆದುಕೊಂಡು ಹೋಗುವ ಕ್ರಮವೊಂದಿದೆ. ಅಂದರೆ ಶ್ರೀ ಕ್ಷೇತ್ರದ ತಾಲ್ಲೂಕಿನ ವಿವಿಧ ಗ್ರಾಮಗಳ ಜನರು ಶ್ರೀ ಕ್ಷೇತ್ರಕ್ಕೆ ಬಂದು ಗುರುಸ್ವಾಮಿಯವರಿಂದ ಶ್ರೀ ಬಸವೇಶ್ವರ ಸ್ವಾಮಿಯ ಕಳಸ ಮತ್ತು ಧ್ವಜವನ್ನು ಪಡೆದುಕೊಂಡು ತಮ್ಮ ಗ್ರಾಮಗಳಿಗೆ ತೆರಳುತ್ತಾರೆ. ಆಯಾ ಗ್ರಾಮಗಳಲ್ಲಿ ಹೆಚ್ಚು ಬಾರಿ ಮಾಲೆ ಹಾಕಿಸಿಕೊಂಡಿರುವ ಮತ್ತು ಪೂಜಾ ಅನುಭವದ ಹಿರಿಯರೊಬ್ಬರು ಗುರುಸ್ವಾಮಿಯಾಗುತ್ತಾರೆ. ಆನಂತರದಲ್ಲಿ ಮಾಲೆ ಹಾಕಿಸಿಕೊಳ್ಳುವ ಗ್ರಾಮದ ಜನರಿಗೆ ಮಾಲೆ ಹಾಕುತ್ತಾರೆ. ಸಾಮಾನ್ಯವಾಗಿ ಮಾಲೆಹಾಕಿಸಿಕೊಳ್ಳುವ ಸ್ವಾಮಿಗಳ ಸಂಖ್ಯೆ ಅಧಿಕವಾದಾಗ ಆಯಾಯ ಗ್ರಾಮಗಳಲ್ಲಿಯೇ ಕಳಸ ಪೂಜೆ ಧ್ವಜ ಪೂಜೆ ಮಾಡಿ ತಮ್ಮ ಭಕ್ತಿಯನ್ನು ಅರ್ಪಿಸುವ ಪರಿಪಾಠವಿದೆ. ಸಂಕ್ರಾಂತಿಯ ಹಿಂದಿನ ದಿನದ ವರೆಗೂ ಪೂಜೆಗಳು ಆಯಾಯ ಗ್ರಾಮದಲ್ಲಿಯೇ ನಡೆಯುತ್ತವೆ. ಪ್ರತಿ ದಿನವೂ ಬೆಳಗಿನ ಪೂಜೆ ಮತ್ತು ಸಂಜೆ ಪೂಜೆ ನಡೆಯುತ್ತದೆ. ಪ್ರತಿಯೊಬ್ಬ ಸ್ವಾಮಿಯು ಪೂಜೆಗೆ ಬರುವ ಮುನ್ನ ಗುರುಸ್ವಾಮಿಗಳೊಡಗೂಡಿ ಶ್ರೀ ಸ್ವಾಮಿಯ ನಾಮಸ್ಮರಣೆ ಮಾಡುತ್ತಾ ಶ್ರೀ ಸ್ವಾಮಿಯ ಬಗೆಗೆ ಹಾಡುಗಳನ್ನು ಹೇಳುತ್ತಾ ಜೈಕಾರ ಹಾಕುತ್ತಾ ಸ್ನಾನ ಮಾಡಿ ಕಳಸ ಪೂಜಿರುವ ಸ್ಥಳದವರೆಗೂ ಭಕ್ತಿಯಿಂದ ಭಾವಪರವಶರಾಗಿ ಕುಣಿಯುತ್ತಾ ಬರುತ್ತಾರೆ.

ಸ್ವಾಮಿಯೆ ಶ್ರೀ ಬಸವೇಶ, ಬಸವೇಶ ಸ್ವಾಮಿಯೇ

ಸ್ವಾಮಿ ದಿಂತಕ ಧೂಂ ಧೂಂ

ಬಸಪ್ಪ ದಿಂತಕ ಧೂಂ ಧೂಂ

ಎಂದು ಹೊಗಳಿಕೊಂಡು ಪೂಜೆ ನೆರವೇರಿಸುತ್ತಾರೆ. ಪೂಜೆಗೆ ಶ್ರೀ ಬಸವೇಶ್ವರ ಸ್ವಾಮಿಗೆ, ನಂದೀಶನಿಗೆ, ಕರುಣಾ ಮೂರ್ತಿಗೆ ಹೀಗೆ ಇನ್ನೂ ಹಲವಾರು ರೀತಿಯ ಜೈಕಾರ ಹಾಕುತ್ತಾ ಸ್ವಾಮಿಯ ಕೃಪೆಗೆ ಪಾತ್ರರಾಗುತ್ತಾರೆ.

## ಪೂಜಾದಿನಗಳಲ್ಲಿನ ಕಾರ್ಯಕ್ರಮಗಳು

ಪ್ರತಿನಿತ್ಯ ಶ್ರೀ ಬಸವೇಶ್ವರಸ್ವಾಮಿಯ ಭಕ್ತರಿಂದ ಕೇವಲ ಪೂಜಾ ಕಾರ್ಯವಲ್ಲದೆ ಇತರ ಚಟುವಟಿಕೆಗಳು ನಡೆಯುತ್ತವೆ. ಪ್ರತಿಯೊಂದು ಗ್ರಾಮದ ಸ್ವಾಮಿಗಳು ಮೂರು ನಾಲ್ಕು ದಿನಗಳ ಕಾಲ ಯಡಿಯೂರು, ಚುಂಚನಗಿರಿ, ಶಿವಗಂಗೆ, ಧರ್ಮಸ್ಥಳ, ಶೃಂಗೇರಿ ಹೀಗೆ ಮುಂತಾದ ಪುಣ್ಯ ಕ್ಷೇತ್ರಗಳ ಪ್ರವಾಸ ಕೈಗೊಳ್ಳುತ್ತಾರೆ. ಅಲ್ಲದೆ ಪ್ರತಿ ದಿನ ರಾತ್ರಿ ಭಜನೆ ಮಾಡುವುದು, ಧಾರ್ಮಿಕ ಮುಖಂಡರುಗಳಿಂದ ಪ್ರವಚನ ಮಾಡಿಸುವುದು, ಶನಿದೇವರ ಕಥೆ ಓದಿಸುವುದು, ಪುರಾಣ ಪ್ರಸಿದ್ಧ ವ್ಯಕ್ತಿಗಳ ಬಗೆಗೆ ಹರಿಕಥೆ ಮಾಡಿಸುವುದು ಹೀಗೆ ಇನ್ನೂ ಹಲವು ರೀತಿಯ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಸಂಕ್ರಾಂತಿಯ ವರೆಗೂ ಈ ರೀತಿಯ ಕಾರ್ಯ ಚಟುವಟಿಕೆಗಳು ಮಾಲೆ ಹಾಕಿಸಿಕೊಂಡಿರುವ ಗ್ರಾಮಗಳಲ್ಲಿ ನಡೆಯುತ್ತವೆ. ಸಂಕ್ರಾಂತಿಯ ಹಿಂದಿನ ದಿನ ಪ್ರತಿಯೊಂದು ಗ್ರಾಮದ ಸ್ವಾಮಿಗಳು ತಮ್ಮ ತಮ್ಮ ಗ್ರಾಮ ದೇವತೆಯನ್ನು ಅಲಂಕರಿಸಿ ಉತ್ಸವದೊಂದಿಗೆ ಗ್ರಾಮದ ಜನರೊಡಗೂಡಿ ಶ್ರೀ ಕ್ಷೇತ್ರಕ್ಕೆ ಬರುತ್ತಾರೆ.

## ಮಾಲೆ ತೆಗೆಸುವುದು

ಮಾಲೆ ತೆಗೆಸುವುದು ಧನುರ್ಮಾಸ ಪೂಜಾ ಕಾರ್ಯಕ್ರಮದ ಕೊನೆಯ ಘಟ್ಟವಾಗಿದೆ. ಶ್ರೀ ಕ್ಷೇತ್ರಕ್ಕೆ ಸ್ವಾಮಿಗಳೆಲ್ಲರೂ ಬರುವ ಮುನ್ನ ತಮ್ಮ ತಮ್ಮ ಗ್ರಾಮಗಳಲ್ಲಿ ಅನ್ನ ಸಂತರ್ಪಣೆಯನ್ನು ಮಾಡಿಕೊಂಡು ಬರುತ್ತಾರೆ. ಒಂದು ದಿನ ಮುಂಚಿತವಾಗಿಯೇ ಬಂದು ಎಲ್ಲರೂ ಗುರುಸ್ವಾಮಿಗಳ ಸಮ್ಮುಖದಲ್ಲಿ ಭಕ್ತಿಯಿಂದ ಶ್ರೀ ಬಸವೇಶ್ವರ ಸ್ವಾಮಿಯನ್ನು ಭಜಿಸುತ್ತಾರೆ. ಆ ದಿನದ ವಿಶೇಷತೆಯೆಂದರೆ ಸುಮಾರು ೨೦ರಿಂದ ೨೫ ಗ್ರಾಮ ದೇವತೆಗಳನ್ನು ಅಲಂಕರಿಸಿಕೊಂಡು ಬಂದು ಶ್ರೀ ಕ್ಷೇತ್ರದಲ್ಲಿ ಉತ್ಸವ ಮಾಡುತ್ತಾರೆ. ಅಂದು ಶ್ರೀ ಕ್ಷೇತ್ರದಲ್ಲಿ ನಡೆಯುವ ಪ್ರತಿಯೊಂದು ಚಟುವಟಿಕೆಗಳು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ದೇವರುಗಳ

ಉತ್ಸವ ಆದ ನಂತರ ಎಲ್ಲಾ ಗ್ರಾಮಗಳ ದೇವರನ್ನು ಸಾಲಾಗಿ ನಿಲ್ಲಿಸಲಾಗುತ್ತದೆ. ಆಕರ್ಷಕವಾಗಿ ಅಲಂಕಾರ ಮಾಡಿರುವ ಮೊದಲ ಮೂರು ಗ್ರಾಮ ದೇವತೆಗಳಿಗೆ ಸ್ವಾಮೀಜಿಯವರು ೫೦೦೧, ೩೦೦೧, ೨೦೦೧ ರೂ ಹಣವನ್ನು ಬಹುಮಾನವಾಗಿ ನೀಡುತ್ತಾರೆ.

ಸಂಜೆ ೬ ಗಂಟೆಗೆ ಪ್ರಾರಂಭವಾಗುವ ಉತ್ಸವ ಇತ್ಯಾದಿ ಕಾರ್ಯಕ್ರಮಗಳು ಮುಗಿಯುವ ಹೊತ್ತಿಗೆ ಬೆಳಗಿನ ಜಾವವಾಗುತ್ತದೆ. ಬೆಳಗಿನ ಜಾವ ಮೂರು ಗಂಟೆಯಿಂದ ಗುರುಸ್ವಾಮಿಗಳು ಮಾಲೆತೆಗೆಯುವ ಕಾರ್ಯವನ್ನು ಕೈಗೊಳ್ಳುತ್ತಾರೆ. ಮಾಲೆತೆಗೆಸಿಕೊಂಡ ಸ್ವಾಮಿಗಳು ಹಾಗೂ ಇತರೆ ಭಕ್ತಾಧಿಗಳು ಶ್ರೀ ಬಸವೇಶ್ವರ ಸ್ವಾಮಿಗೆ ಭಕ್ತಿಯಿಂದ ಮುಡಿಕೊಡುತ್ತಾರೆ.

ಧನುರ್ಮಾಸ ಪೂಜೆಯ ಸಂದರ್ಭದಲ್ಲಿ ಮಾಲೆ ತೆಗೆಸುವ ದಿನ ಜನಸಾಗರವೇ ಶ್ರೀ ಕ್ಷೇತ್ರಕ್ಕೆ ಹರಿದುಬರುತ್ತದೆ. ಅಂದು ಶ್ರೀ ಬಸವೇಶ್ವರ ಸ್ವಾಮಿಯ ಹಣದ ಹುಂಡಿಯಲ್ಲಿ ಐದರಿಂದ ಆರು ಲಕ್ಷ ರೂ ಹಣವು ಭಕ್ತಾಧಿಗಳಿಂದ ಸಂಗ್ರಹವಾಗುತ್ತದೆ. ಪ್ರತಿ ವರ್ಷವೂ ಮಾಲೆ ಹಾಕಿಸಿಕೊಳ್ಳುವ ಭಕ್ತರ ಸಂಖ್ಯೆ ಅಧಿಕವಾಗುತ್ತಲೇ ಹೋಗುತ್ತಿದೆ. ಶ್ರೀ ಕ್ಷೇತ್ರದ ಸ್ವಾಮಿಯ ಮಾಲೆ ಹಾಕಿಸಿಕೊಳ್ಳುವುದರಿಂದ ಶ್ರೀ ಸ್ವಾಮಿಯು ನಮ್ಮ ಬದುಕಿನ ಕಷ್ಟಕಾರ್ಪಣ್ಯಗಳನ್ನು ತೊಲಗಿಸಿ ನೆಮ್ಮದಿಯನ್ನು ನೀಡುತ್ತಾನೆ ಎಂಬ ನಂಬಿಕೆ ಜನರಲ್ಲಿದೆ. ಒಂದು ವರ್ಷ ಮಾಲೆ ಹಾಕಿಸಿಕೊಳ್ಳುವುದಕ್ಕಿಂತ ಮೂರು ಬಾರಿ ಮಾಲೆ ಹಾಕಿಸಿಕೊಂಡರೆ ಒಳ್ಳೆಯದು ಎಂಬ ಭಾವನೆ ಭಕ್ತಾಧಿಗಳದು.

ಒಟ್ಟಿನಲ್ಲಿ ದೂರದ ಶಬರಿಮಲೆ ಯಾತ್ರೆಗೆ ದುಬಾರಿ ವೆಚ್ಚದಲ್ಲಿ ಹೋಗುವುದಕ್ಕಿಂತ ನಮ್ಮ ಹತ್ತಿರದಲ್ಲಿರುವ ಶ್ರೀ ಸ್ವಾಮಿಯ ಮಾಲೆಯನ್ನು ಹಾಕಿಸಿಕೊಳ್ಳಬೇಕೆಂಬ ಹಂಬಲ ಜನರಲ್ಲಿ ಇತ್ತೀಚೆಗೆ ಅಧಿಕವಾಗುತ್ತಿದೆ. ಕಳೆದ ಆರು ಏಳು ವರ್ಷಗಳಿಂದ ಪ್ರಾರಂಭವಾದ ಧನುರ್ಮಾಸ ಪೂಜಾ ಪದ್ಧತಿ (ಮಾಲೆ ಹಾಕಿಸುವುದು) ಇಂದು ಬೃಹದಾಕಾರವಾಗಿ ವಿಸ್ತರಿಸುತ್ತಿದ್ದು ದಿನೇ ದಿನೇ ಭಕ್ತರ ಸಂಖ್ಯೆ ದ್ವಿಗುಣಗೊಳ್ಳುತ್ತಲ್ಲಿರುವುದು ಆಶ್ಚರ್ಯವಾದರೂ ಸತ್ಯಸಂಗತಿಯಾಗಿದೆ.

## ಮಹಾ ಸಂಸ್ಥಾನ ಮಠದ ಶಾಖಾ ಮಠವಾಗಿ ಶ್ರೀ ಕ್ಷೇತ್ರ

ಶ್ರೀ ಕ್ಷೇತ್ರ ಕಬ್ಬಳ್ಳಿಯು ಭಕ್ತಾದಿಗಳ ಆಕರ್ಷಕ ಕೇಂದ್ರವಾಗಿ ದಿನೇ, ದಿನೇ ಪ್ರಸಿದ್ಧಿಯನ್ನು ವಿಸ್ತರಿಸಿಕೊಳ್ಳುತ್ತಾ ಸಾಗಿದೆ. ವಿಪುಲ ಆದಾಯವು ಹಣ, ಚಿನ್ನದ ರೂಪದಲ್ಲಿ ಭಕ್ತಾದಿಗಳಿಂದ ಕಾಣಿಕೆಯಾಗಿ ಬಂದರೂ ಅದರ ಸಮರ್ಪಕ ನಿರ್ವಹಣೆಯ ಕೊರತೆಯಿಂದ ಅಭಿವೃದ್ಧಿ ಕಾರ್ಯ ಕುಂಠಿತವಾಯಿತು. ಇದನ್ನು ಮನಗಂಡ ಗ್ರಾಮದ ಕೆಲವು ಹಿರಿಯರು ಶ್ರೀ ಕ್ಷೇತ್ರವನ್ನು ಶ್ರೀ ಆದಿಚುಂಚನಗಿರಿ ಮಹಾ ಸಂಸ್ಥಾನ ಮಠಕ್ಕೆ ಮಹಿಸಿಕೊಡಲು ತೀರ್ಮಾನಿಸಿದರು.

ಪ್ರಾರಂಭದಲ್ಲಿ ಈ ತೀರ್ಮಾನಕ್ಕೆ ಗ್ರಾಮದ ಹಲವು ಜನರಿಂದ ವಿರೋಧ ವ್ಯಕ್ತವಾಯಿತಾದರೂ, ಶ್ರೀ ಬಾಲಗಂಗಾಧರನಾಥಸ್ವಾಮಿ ಯವರ ಸಾಮಾಜಿಕ ಕಾರ್ಯಗಳನ್ನು ಮನಗಂಡ ಜನರು ಕೊನೆಗೆ ಸಮ್ಮತಿಸಿದರು.

ಕಬ್ಬಳಿಯ ಗ್ರಾಮಸ್ಥರೆಲ್ಲಾ ಪಂಚಾಯ್ತಿಗಳಲ್ಲಿ ಸೇರಿ ತೀರ್ಮಾನಿಸಿ 2002 ರಲ್ಲಿ ಶ್ರೀ ಕ್ಷೇತ್ರವನ್ನು ಚುಂಚನಗಿರಿ ಮಠಕ್ಕೆ ವಹಿಸಿದರು. ನಂತರದ ದಿನಗಳಲ್ಲಿ ಶ್ರೀ ಕ್ಷೇತ್ರದಲ್ಲಿ ಸಾಕಷ್ಟು ಅಭಿವೃದ್ಧಿ ಕೆಲಸಗಳು ಸಾಗಿವೆ. ಮತ್ತು ನಡೆಯುತ್ತಲೇ ಇವೆ.

ಸ್ವಾಮಿಜಿಯವರು ವಹಿಸಿಕೊಂಡ ನಂತರ ಮೊದಲು ಕಲ್ಯಾಣ ಮಂಟಪವೊಂದನ್ನು ನಿರ್ಮಿಸಿದರು. ಕ್ರಮೇಣ ಮುಡಿಕೊಡುವ ಮನೆ, ವ್ಯಾಪರ ಮಳಿಗೆಗಳ ಸಂಕೀರ್ಣ, ಪಂಡಿತರಿಗೊಂದು ವಾಸದ ಮನೆ, ಹೀಗೆ ಹಲವಾರು ಮನೆಗಳನ್ನು ನಿರ್ಮಾಣ ಮಾಡಿದ್ದಾರೆ. ಇವೆಲ್ಲವುಗಳಿಗಿಂತ ಪ್ರಮುಖವಾಗಿ ನಗರಗಳಲ್ಲಿ ಇರುವಂತಹ ಭವ್ಯ ಮತ್ತು ಸುಸಜ್ಜಿತವಾದ ಪ್ರೌಢಶಾಲಾ ಕಟ್ಟಡವೊಂದನ್ನು ನಿರ್ಮಿಸಿದ್ದಾರೆ. ಶ್ರೀ.ಶ್ರೀ. ಶಿವಕುಮಾರನಾಥ ಸ್ವಾಮಿಜಿಯವರ ನೇತೃತ್ವದಲ್ಲಿ ಅಭಿವೃದ್ಧಿ ಕೆಲಸಗಳು ಸಾಗುತ್ತಲೇ ಇವೆ. ಕಲ್ಯಾಣಿಯ ದುರಸ್ತಿ ಕಾರ್ಯ ಮಾಡಿಸಲಾಗಿದೆ. ಶ್ರೀ ಕ್ಷೇತ್ರದಲ್ಲಿ ಸ್ವಾಮಿಜಿಯವರು ಕೇವಲ ಅಭಿವೃದ್ಧಿ ಕೆಲಸ ಮಾಡದೆ ಶ್ರೀ ಬಸವೇಶ್ವರ ಸ್ವಾಮಿಯಿಂದ ವಿವಿಧ ರೀತಿಯ ಆದಾಯವನ್ನು ಪಡೆದುಕೊಳ್ಳುವ ಹಾಗೆ ಕೆಲವು ನೀತಿ–ನಿಯಮಗಳನ್ನು ರೂಪಿಸಿದ್ದಾರೆ. ಶ್ರೀ ಸ್ವಾಮಿಯ ಮೇಲಿನ ಭಕ್ತಿಗೀತೆಗಳ ಧ್ವನಿ ಸುರಳಿ ಹೊರತಂದಿದ್ದಾರೆ. ಶ್ರೀ ಸ್ವಾಮಿಯ ಹೆಸರಿನಲ್ಲಿ ಕ್ಯಾಲೆಂಡರ್ ಮುದ್ರಿಸಿ ಮಾರಾಟ ಮಾಡಲಾಗುತ್ತದೆ. ಕೊರಳಿಗೆ ಹಾಕುವ ದಾರಗಳು, ಕೈಗೆ ಕಟ್ಟಿಕೊಳ್ಳುವ ದಾರದಲ್ಲಿ ಶ್ರೀ ಸ್ವಾಮಿಯ ಭಾವಚಿತ್ರ ಸೇರಿಸಿ

ಹೆಣೆಸಲಾಗಿದೆ. (ಡಾಲರ್‌ಗಳು) ಮಾತ್ರವಲ್ಲ ಶ್ರೀ ಸ್ವಾಮಿಯ ಭಾವಚಿತ್ರಕ್ಕೆ ಲ್ಯಾಮಿನೇಷನ್ ಮಾಡಿ ಮಾರಾಟ ಮಾಡಲಾಗುತ್ತಿದೆ. ಶ್ರೀ ಸ್ವಾಮಿಯ ದೇವಸ್ಥಾನಕ್ಕೆ ಪೂಜೆಗಾಗಿ ಬರುವ ವಾಹನಗಳಿಗೆ ಪೂಜಾ ಶುಲ್ಕ ನಿಗದಿ ಪಡಿಸಲಾಗಿದೆ. ಮುಡಿಕೊಡಲು 10 ರೂ ನಿಗದಿಪಡಿಸಲಾಗಿದೆ. ಹೀಗೆ ಪ್ರತಿಯೊಂದು ಅಂಶಗಳಿಗೂ ಭಕ್ತಾದಿಗಳಿಂದ ಹುಂಡಿ ಹಣವೂ ಸೇರಿ ಸುಮಾರು 25,00,000 (ಇಪ್ಪತ್ತೈದು ಲಕ್ಷ) ಕ್ಕೂ ಅಧಿಕ ಹಣ ಶ್ರೀ ಕ್ಷೇತ್ರದಲ್ಲಿ ಒಂದು ವರ್ಷಕ್ಕೆ ಸಂಗ್ರಹವಾಗುತ್ತದೆ. ಈ ಎಲ್ಲಾ ಹಣವನ್ನು ಶ್ರೀ ಕ್ಷೇತ್ರದ ಅಭಿವೃದ್ಧಿಗಾಗಿಯೇ ವಿನಿಯೋಗಿಸಲಾಗುತ್ತಿದೆ ಎಂದು ಶ್ರೀ ಶ್ರೀ ಶಿವಕುಮಾರನಾಥ ಸ್ವಾಮೀಜಿಯವರು ಹೇಳುತ್ತಾರೆ.

# ಉಪಸಂಹಾರ

೨೧ನೇ ಶತಮಾನ ಸಂಪೂರ್ಣವಾಗಿ ಬದಲಾವಣೆಗೆ ಒಳಪಟ್ಟಿರುವುದು ಪ್ರತಿಯೊಬ್ಬ ಭಾರತೀಯನಿಗೂ ತಿಳಿದಿರುವ ವಿಚಾರವಾಗಿದೆ. ಅಂದರೆ ಪರಿವರ್ತನೆಯು ಈ ಜಗದ ನಿಯಮ. ಭಾರತದ ಎಲ್ಲಾ ರಂಗಗಳಲ್ಲಿಯೂ ಶೀಘ್ರಗತಿಯ ಆಮೂಲಾಗ್ರ ಬದಲಾವಣೆಯುಂಟಾಗುತ್ತಿದೆ. ಇದಕ್ಕೆ ಕಾರಣಗಳು ಹಲವಾರು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ತಮ್ಮ ಹಳ್ಳಿಯನ್ನು ತೊರೆದು ನಗರಗಳ ಬೆನ್ನು ಹತ್ತಿ ಹೊರಡುವ ಜನರ ಸಂಖ್ಯೆ ಅಧಿಕವಾಗುತ್ತಿದೆ. ಮಾತ್ರವಲ್ಲ ಜನಪದ ಸಂಸ್ಕೃತಿಗಳ ತೂಗುತೊಟ್ಟಿಲುಗಳಾಗಿದ್ದ ಗ್ರಾಮಗಳು ವೈಯಾರದ ಫ್ಯಾಷನ್ ನಾಗರಿಕತೆಯ ಸ್ಪರ್ಶವನ್ನು ಪಡೆದು ಹೊಸತನದೆಡೆಗೆ ತುಡಿಯುತ್ತಿವೆ. ಇಂತಹ ಸಂದರ್ಭಗಳಲ್ಲಿ ಗ್ರಾಮೀಣ ಜನರು ತಮ್ಮ ಸಂಸ್ಕೃತಿಯ ಸಹಭಾಗಿತ್ವದ ಬೇರುಗಳನ್ನು ತುಂಡರಿಸಿಕೊಂಡು ಅಸ್ತಿತ್ವವೇ ಇಲ್ಲದ ಅನರ್ಥ ಕೃತಿಯ ಕೃಷಿಯೊಂದಕ್ಕೆ ಹುರುಡು ನಡೆಸಿದ್ದಾರೆ. ಈ ಅಂಶ ಇತ್ತೀಚಿನ ದಿನಗಳಲ್ಲಿ ಸರ್ವೇ ಸಾಮಾನ್ಯವಾಗಿ ಪ್ರತಿಯೊಂದು ಗ್ರಾಮಗಳಲ್ಲಿಯೂ ಕಂಡು ಬರುತ್ತಿರುವ ವಿಚಾರವಾಗಿದೆ.

ಶ್ರೀ ಕ್ಷೇತ್ರ ಕಬ್ಬಳಿಯಲ್ಲಿ ಅಡಗಿರುವ ಔಚಿತ್ಯ ಪೂರ್ಣ ಸಂಸ್ಕೃತಿಗಳ ಅನಾವರಣಕ್ಕೆ ಈ ನಿಬಂಧದಲ್ಲಿ ಹೆಚ್ಚು ಒತ್ತು ನೀಡಲಾಗಿದೆ. ಸಂಶಯಗಳಿಗೆ ಎಡೆಯಿಲ್ಲದಂತೆ ಭೌಗೋಳಿಕ ಅಂಶಗಳನ್ನು, ಐತಿಹಾಸಿಕ ಹಿನ್ನೆಲೆಗಳನ್ನು, ಸಾಂಸ್ಕೃತಿಕ ವಿಚಾರಗಳನ್ನು ಅತ್ಯಂತ ಎಚ್ಚರಿಕೆಯಿಂದ ನಿರೂಪಿಸಲಾಗಿದೆ. ಮಾತ್ರವಲ್ಲ ಶ್ರೀ ಕ್ಷೇತ್ರದಲ್ಲಿರುವ ನಂಬಿಕೆಗಳು, ನಡವಳಿಕೆಗಳು, ಅಳಿವಿನಂಚಿನಲ್ಲಿರುವ ದೇವಾಲಯಗಳು ಇತ್ಯಾದಿ ವಿಚಾರಗಳನ್ನು ಪ್ರಸ್ತುತ ಪಡಿಸಲಾಗಿದೆ. ಕಬ್ಬಳಿ ಗ್ರಾಮದ ಶಿಕ್ಷಣ, ಸಾಕ್ಷರತೆಯ ಪ್ರಮಾಣ, ಸಾರಿಗೆ ಸಂಪರ್ಕ, ಜಾತ್ರಾ ಮಹೋತ್ಸವ, ಸಂತೆಗಳ ವಿಚಾರದ ಜೊತೆಗೆ ಗ್ರಾಮೀಣ ಕ್ರೀಡೆಗಳ ಕಲೆ ಮತ್ತು ಕುಣಿತಗಳ ಬಗೆಗೆ ವಿವರವಾಗಿ ತಿಳಿಸಲಾಗಿದೆ. ಶ್ರೀ ಕ್ಷೇತ್ರವನ್ನು ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠಕ್ಕೆ ಹಸ್ತಾಂತರಿಸಿದ ನಂತರ ಆಗಿರುವ ಅಭಿವೃದ್ಧಿ ಕಾರ್ಯಗಳ

ಬಗೆಗೂ ವಿವರವಾಗಿ ತಿಳಿಸಲಾಗಿದೆ.

ಕುತೂಹಲಿಗೆ ಈ ಜಗತ್ತು ವಿಸ್ಮಯವಾಗಿ ಕಾಣುತ್ತದೆ. ಪ್ರತಿಯೊಂದು ಗ್ರಾಮವೂ ತಮ್ಮದೇ ಆಚಾರ ವಿಚಾರಗಳನ್ನು ಹೊಂದಿರುತ್ತದೆ. ಕೆಲವು ಗ್ರಾಮಗಳು ಹಿಂದಿನ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಬಂದರೆ ಹಲವು ಗ್ರಾಮಗಳು ಹೊಸ ಹೊಸ ಸಂಸ್ಕೃತಿಗಳನ್ನು ಮೈಗೂಡಿಸಿಕೊಳ್ಳುತ್ತವೆ. ಇದಕ್ಕೆ ಶ್ರೀ ಕ್ಷೇತ್ರದಲ್ಲಿ ಪ್ರತಿವರ್ಷವೂ ವಿಸ್ತರಿಸುತ್ತಿರುವ ಧನುರ್ಮಾಸ ಪೂಜಾ ಕಾರ್ಯಕ್ರಮವು ಸಾಕ್ಷಿಯಾಗಿದೆ. ನೂರಾರು ವರ್ಷಗಳ ಇತಿಹಾಸ ಹೊಂದಿರುವ ದೇವಾಲಯಗಳು, ಶಾಸನಗಳು ಈ ಕ್ಷೇತ್ರದಲ್ಲಿದ್ದು ಸಂಶೋಧಕರ, ಇತಿಹಾಸ ತಜ್ಞರ ನಿರ್ಲಕ್ಷಕ್ಕೆ ಒಳಗಾಗಿ ಪುನರ್ ನವೀಕರಣದ ಹೆಸರಿನಲ್ಲಿ ತಮ್ಮ ನಿಜ ಮೌಲ್ಯಗಳನ್ನು ಕಳೆದುಕೊಂಡು ಆಧುನಿಕತೆಯ ವೇಷ ಪಡೆಯುತ್ತಿವೆ. ಇಲ್ಲಿರುವ ಗಂಗಮ್ಮ ಬಾವಿ, ಕಲ್ಯಾಣಿ ಮುಂತಾದವುಗಳ ಸಂರಕ್ಷಣೆ ಆಗಬೇಕಾದ ಅನಿವಾರ್ಯತೆಯಿದೆ. ಸರ್ಕಾರ ಮತ್ತು ಸಂಶೋಧಕರು ಈ ಊರಿನ ಬಗೆಗೆ ವಿಶೇಷ ಕಾಳಜಿ ವಹಿಸಿದರೆ ಅಮೂಲ್ಯ ಸಾಂಸ್ಕೃತಿಕ ರತ್ನವೊಂದು ಸಿಗುವುದರಲ್ಲಿ ಅನುಮಾನವಿಲ್ಲ.

ಕಬ್ಬಳಿ ಗ್ರಾಮದಿಂದ ಕೂಗಳತೆಯಲ್ಲಿರುವ ಬೋರೆಯ ಮೇಲೆ ಕಟ್ಟಲಾಗಿರುವ ದೇವಸ್ಥಾನವೊಂದು ಶ್ರೀ ಕ್ಷೇತ್ರವಾಗಿ ಪರಿವರ್ತಿತವಾಗಿರುವುದು ಈ ಗ್ರಾಮಕ್ಕೆ ಬಂದಿರುವ ಸಾಂಸ್ಕೃತಿಕ ಕಿರೀಟ ಎನ್ನಬಹುದು. ಭಕ್ತಾದಿಗಳ ಹಾಲು-ತುಪ್ಪ ಅಭಿಷೇಕಗಳಿಂದ ಪ್ರಾರಂಭವಾದ ಪೂಜಾ ಕಾರ್ಯಕ್ರಮ ಇಂದು ದೊಡ್ಡ ಸಂಭ್ರಮಾಚರಣೆಯಾಗಿದೆ. ಹಲವು ದಂತಕಥೆಗಳ ಕೇಂದ್ರವಾಗಿರುವ ಶ್ರೀ ಕ್ಷೇತ್ರವು ಇಂದು ಜನರ ಆಕರ್ಷಣೆಯ ಕೇಂದ್ರವಾಗಿದೆ. ಜಗತ್ತು ಎಷ್ಟೇ ಆಧುನಿಕತೆಗೆ ಒಳಗಾಗಿದ್ದರೂ ಕೆಲವು ಮೂಲಭೂತ ನಂಬಿಕೆ ಸಂಪ್ರದಾಯಗಳು ಜೀವಂತವಾಗಿರುವುದಕ್ಕೆ ಶ್ರೀ ಕ್ಷೇತ್ರವೇ ಸಾಕ್ಷಿಯಾಗಿದೆ. ಶ್ರೀ ಕ್ಷೇತ್ರದಲ್ಲಿ ನಡೆಯುವ ಪ್ರತಿಯೊಂದು ಕಾರ್ಯಕ್ರಮಗಳಲ್ಲಿಯು ಸಾಂಸ್ಕೃತಿಕ ಸೊಗಡಿನ ವೈಶಿಷ್ಟ್ಯತೆ ಇರುವುದರಿಂದ ಶ್ರೀ ಕ್ಷೇತ್ರದ ಸಾಂಸ್ಕೃತಿಕ ಅಧ್ಯಯನ ತುಂಬಾ ಮೌಲಿಕವಾದುದು.



ಶ್ರೀ ಬಸವೇಶ್ವರ ಸ್ವಾಮಿಯವರ ಗರ್ಭಗುಡಿ



ಧನುರ್ಮಾಸ ಪೂಜೆಯ ಸಂದರ್ಭದಲ್ಲಿ ಪೂಜಿಸಲಾಗಿರುವ ಕಳಶ



ಪ್ರವಾಸಕ್ಕೆ ಹೊರಡುವ ಮುನ್ನ ಪೂಜಾ ನಿರತ ಸ್ವಾಮಿಗಳು



ಪ್ರವಾಸಕ್ಕೆ ಸಿದ್ಧವಾಗಿರುವ ಸ್ವಾಮಿಗಳ ತಂಡ



ಉತ್ಸವಕ್ಕೆ ಬಂದಿರುವ ಗುಂಗರಮೆಳೆ ಗ್ರಾಮದೇವತೆ



ಉತ್ಸವಕ್ಕೆ ಬಂದಿರುವ ಮೂಕೀಕೆರೆ ಗ್ರಾಮದೇವತೆ



ಶ್ರೀ ಕ್ಷೇತ್ರದಲ್ಲಿರುವ ಒಂದು ಅಪೂರ್ಣ ಶಾಸನ



ಭಜನೆ ಮಾಡುತ್ತಿರುವ ಸ್ವಾಮಿಗಳ ಸಮೂಹ



ಧನುರ್ಮಾಸ ಪೂಜೆಯ ಉದ್ಘಾಟನೆಗೆ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾ ಸ್ವಾಮೀಜಿಯವರು ಆಗಮಿಸಿರುವುದು.



ಸೇವಾ ನಿರತ ಶಾಲಾ ವಾಹನ



ಜಾತ್ರೆಯ ಅಂಗಡಿ ವ್ಯಾಪಾರಿ



ಧನುರ್ಮಾಸ ಪೂಜಾ ಸಂದರ್ಭದಲ್ಲಿ ಅಲಂಕೃತಗೊಂಡಿರುವ ಗ್ರಾಮ ದೇವತೆ



ಶ್ರೀ ಕ್ಷೇತ್ರದಲ್ಲಿ ಬಡವರಿಗಾಗಿ ನಿರ್ಮಾಣಗೊಂಡಿರುವ ಶ್ರೀ ಬಸವೇಶ್ವರ ಕಲ್ಯಾಣ ಮಂಟಪ

ಮಾಹಿತಿದಾರರು:-

| ಕ್ರಸಂ | ಹೆಸರು | ವಯಸ್ಸು | ಊರು | ವೃತ್ತಿ |
|---|---|---|---|---|
| 1. | ಕೆಂಪೇಗೌಡ | 48 | ಕಬ್ಬಳಿ | ತೆಂಗಿನಕಾಯಿ ವ್ಯಾಪಾರಿ |
| 2. | ಗಂಗಣ್ಣ | 45 | ಕಬ್ಬಳಿ | ವ್ಯವಸಾಯ |
| 3. | ದೇವರಾಜು | 52 | ಕಬ್ಬಳಿ | ವ್ಯವಸಾಯ |
| 4. | ಬಸವೇಗೌಡ | 55 | ಕಬ್ಬಳಿ | ವ್ಯವಸಾಯ |
| 5. | ಬಸವಯ್ಯ | 92 | ಮಂಡಲಿಕನಹಳ್ಳಿ | ಅಂಗಡಿ ವ್ಯಾಪಾರಿ |
| 6. | ಕುಮಾರ್ | 40 | ಮಲ್ಲೇನಹಳ್ಳಿ | ಛಾಯಗ್ರಾಹಕರು |
| 7. | ಭೀಮರಾಜು | 45 | ಬಿಳಿಕೆರೆ | ದೇವಸ್ಥಾನದ ಕಾವಲುಗಾರರು |
| 8. | ಲಿಂಗೇಗೌಡ | 75 | ಕಬ್ಬಳಿ | ವ್ಯವಸಾಯ |
| 9. | ಸ್ವಾಮಿ | 35 | ಕಬ್ಬಳಿ | ಅರ್ಚಕರು |
| 10. | ಸುಬ್ರಮಣ್ಯ | 50 | ಕಬ್ಬಳಿ | ಅರ್ಚಕರು |
| 11. | ಪಂಡಿತರು | 45 | ಆದಿಚುಂಚನಗಿರಿ | ಶ್ರೀ ಕ್ಷೇತ್ರದ ಉಸ್ತುವಾರಿ |

## ಪರಾಮರ್ಶನ ಗ್ರಂಥಗಳು

೧. ಜೀ.ಶಂ.ಪ ಅವರ ಜಾನಪದ ಬರಹಗಳು

ಸಂ : ಅಂಬಳಿಕೆ ಹಿರಿಯಣ್ಣ

ಕಾಳೇಗೌಡ ನಾಗಾವಾರ

ಪ್ರಕಾಶನ : ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.

೨. ಜಾನಪದ ಸಾಹಿತ್ಯ.

ಲೇಖಕರು : ಕಾಳೇಗೌಡ ನಾಗಾವಾರ

ಪ್ರಕಾಶಕರು : ಯುಗಾದಿ ಪ್ರಕಾಶನ ಬೆಂಗಳೂರು.

೩. ಜಾನಪದ ಅಧ್ಯಯನ.

ಲೇಖಕರು : ದೇಜಗೌ

ಪ್ರಕಾಶಕರು : ಚೇತನ್ ಬುಕ್ ಹೌಸ್ ಮೈಸೂರು-೧೪

೪. ದಕ್ಷಿಣ ಕರ್ನಾಟಕದ ಜಾನಪದ ಕಾವ್ಯ ಪ್ರಕಾರಗಳು .

ಲೇಖಕರು : ಜೀ.ಶಂ.ಪರಮಶಿವಯ್ಯ.

ಪ್ರಕಟಣೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

